# ಹಿಂದೂ ವಾರಸಾ ಕಾಯಿದೆ

(ಭಾರತೀಯ ಸಂಸತ್ತಿನ ಇ. ಸ. ೧೯೫೬ ರ ೩೦ನೆಯ ಕಾಯಿದೆಯ ಕುರಿತು
ಸಂಕ್ಷಿಪ್ತ ಕಲಮುವಾರ ಟೀಕೆಯು.)

ಮೈಸೂರು ಹೈಕೋರ್ಟಿನ ನ್ಯಾಯಮೂರ್ತಿಗಳಾಗಿರುವ
ಮಾನ್ಯ ಶ್ರೀ ನಿಟ್ಟೂರ ಶ್ರೀನಿವಾಸರಾಯರ
ಮುನ್ನುಡಿಯೊಡನೆ


## ಪಿ. ಎಸ್. ಪಾಟೀಲ ಬಿ. ಎ. (ಆನ್ಸ) ಎಲ್. ಎಲ್. ಬಿ.

ಎಡ್ವೋಕೇಟ್ ಮೈಸೂರ ಹಾಯಕೋರ್ಟ ವಿಜಾಪುರ.



೧೯೫೮

ವಿಜಾಪುರ

ಬೆಲೆ ಮೂರು ರೂಪಾಯಿ

ಕರ್ನಾಟಕ ವೈಭವ ಪ್ರಕಾಶನ

## ಮಾನ್ಯ ನ್ಯಾಯಮೂರ್ತಿಗಳ

# ಮುನ್ನುಡಿ

ನಮ್ಮ ಜನಕ್ಕೆ ದೇಶದ ಕಾನೂನುಗಳ ತಿಳುವಳಿಕೆ ಚೆನ್ನಾಗಿ ಆಗಬೇಕಾದರೆ ಆ ಕಾನೂನುಗಳು ಜನದ ಭಾಷೆಯಲ್ಲಿರುವುದು ಅವಶ್ಯಕವೆಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ಆದ್ದರಿಂದ ಕಾನೂನು ವಿಷಯಗಳನ್ನು ಪ್ರಸ್ತಾಪಿಸಿ ಬರೆದ ಪುಸ್ತಕಗಳು ಈಚೆಗೆ ಹೊರಬೀಳುತ್ತಿರುವುದು ಶುಭ ಸೂಚನೆಯಾಗಿದೆ.

ಹಿಂದೂ ಶಾಸನದಲ್ಲಿ ತೀವ್ರ ಸುಧಾರಣೆಗಳನ್ನುಂಟು ಮಾಡುವ ಉದ್ದೇಶದಿಂದ ಇತ್ತೀಚೆಗೆ ಜಾರಿಗೆ ತರಲಾದ ಕಾನೂನುಗಳು ನಮ್ಮ ದೇಶದ ಜನತೆಯಲ್ಲಿ ಬಹು ದೊಡ್ಡ ವರ್ಗವಾದ ಹಿಂದುಗಳ ಬದುಕಿನ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡತಕ್ಕವಾಗಿವೆ. 'ಹಿಂದೂ ವಾರಸಾ ಕಾಯಿದೆ' ಅಂಥಾ ಕಾನೂನಗಳಲ್ಲೊಂದು. ಈ ಪುಸ್ತಕವು ಆ ಕಾನೂನಿನ ಕನ್ನಡ ತರ್ಜುಮೆಯನ್ನೂ ಸಂಕ್ಷೇಪ ವಿವರಣೆಗಳನ್ನೂ ಒಳಗೊಂಡು ಬಹು ಪ್ರಯೋಜನಕಾರಿಯಾಗಿವೆ

ಈ ಪುಸ್ತಕದಲ್ಲಿ ಕಾನೂನಿಗೆ ಸಂಬಂಧಿಸಿದಂತೆ ಐತಿಹಾಸಿಕ ಹಿನ್ನೆಲೆಯನ್ನೂ ಕಾನೂನಿನ ವಿವಿಧ ಕಲಮುಗಳ ಅರ್ಥ ಪ್ರಸಂಗಕ್ಕೆ ಸಹಾಯ ಮಾಡುವ ಹೈಕೋರ್ಟುಗಳ ತೀರ್ಪುಗಳಲ್ಲಿ ವ್ಯಕ್ತವಾಗಿರುವ ತತ್ವಗಳನ್ನೂ ಉಲ್ಲೇಖಿಸಿರುವುದರಿಂದ ಪುಸ್ತಕದ ಉಪಯುಕ್ತತೆ ಇನ್ನೂ ಹೆಚ್ಚಿದೆ.

ಕನ್ನಡದಲ್ಲಿ ಶಾಸನ ಪರಿಭಾಷೆಯ ಬಗ್ಗೆ ನಾವು ಇನ್ನೂ ಪ್ರಯೋಗಾವಸ್ಥೆಯಲ್ಲಿದ್ದೇವೆ. ಈ ಪರಿಭಾಷೆಯ ಶಬ್ದಸಂಪತ್ತಿ ಒದಗಬೇಕಾದರೆ ನಿಸ್ಪೃಷ್ಟವಾದ ಶಾಸನ ಪಾಂಡಿತ್ಯ, ಭಾಷಾ ಪಾಂಡಿತ್ಯಗಳಷ್ಟೇ ಸಾಲದು. ಈ ಶಬ್ದಗಳು ದಿನವಹಿ ಬಳಕೆಯ ಒರೆಗಲ್ಲಿನಲ್ಲೂ ಸಲ್ಲಬೇಕು. ಪರಿಭಾಷೆಯನ್ನು ಸಂತತವಾಗಿ ಪ್ರಯೋಗಿಸಿ ಪರೀಕ್ಷೆಗೊಳಪಡಿಸುತ್ತಿದ್ದರೆ ನಮ್ಮ ಶಾಸನ ಗ್ರಂಥಗಳಲ್ಲಿನ ಭಾಷಾಪ್ರಯೋಗಗಳು ನ್ಯೂನಾತಿರೇಕಗಳನ್ನೂ ಕ್ಲೇಶಗಳನ್ನೂ ಕಳೆದುಕೊಂಡು ಅರ್ಥ ಸುಲಭತೆಯನ್ನೂ ಸಮೀಚೀನತೆಯನ್ನೂ ಪಡೆದುಕೊಂಡಾವು ಈ ಕಾರ್ಯ ನಡೆಯಲು, ಈಗಾಗಲೇ ಪ್ರಕಟವಾದ ಮತ್ತು ಮುಂದೆ ಪ್ರಕಟವಾಗಬಹುದಾದ ಪುಸ್ತಕಗಳಂತೆ, ಈ ಪುಸ್ತಕವೂ ನೆರವಾಗುವುದರಲ್ಲಿ ಸಂದೇಹವಿಲ್ಲ. ಈ ಕಾರಣಕ್ಕಾಗಿಯೂ ಈ ಪುಸ್ತಕವನ್ನು ಸಂತೋಷದಿಂದ ಸ್ವಾಗತಿಸುತ್ತೇನೆ.

ಬೆಂಗಳೂರು<br>
೧೯-೯-೫೮

ನಿಟ್ಟೂರು ಶ್ರೀನಿವಾಸರಾವ್

# ಪ್ರಕಾಶಕರ ಮಾತು

ದೇಶದ ಕಾಯದೆ ಕಾನೂನುಗಳೆಲ್ಲ ಇನ್ನುಮುಂದೆ ಪ್ರತಿಯೊಂದು ಪ್ರಾಂತೀಯ ಭಾಷೆಯಲ್ಲಿ ಪ್ರಕಟವಾಗುವದು ಅವಶ್ಯವಿದೆ. ಸಾಮಾನ್ಯ ಜನತೆಯು ಕೂಡ ಕಾಯದೆ ಜ್ಞಾನವನ್ನು ಮಾಡಿಕೊಳ್ಳಲು ಆತುರ ಪಡುತ್ತಿದೆ ಈಗಿನ ಪ್ರಜಾಪ್ರಭುತ್ವ ಕಾಲದಲ್ಲಿ ಪ್ರತಿಯೊಬ್ಬನು ತನ್ನ ಹಕ್ಕು ಬಾಧ್ಯತೆಗಳನ್ನು ಅರಿತುಕೊಳ್ಳ ಲೆತ್ನಿಸುವದು ಸ್ವಾಭಾವಿಕ. ೧೯೫೬ ರಲ್ಲಿ ಹಿಂದೂ ವಾರಸಾ ಕಾಯದೆ ತಿದ್ದ ಲ್ಪಟ್ಟು ಅನೇಕ ಕ್ರಾಂತಿಕಾರಕ ಬದಲಾವಣೆಗಳನ್ನು ಮಾಡಲಾಗಿದೆ. ಹಿಂದೂ ಅವಿಭಕ್ತ ಕುಟುಂಬದಲ್ಲಿ ಈ ಕಾಯ್ದೆಯಿಂದ ಆಸ್ತಿಯು ರೂಢಿಯಂತೆ ಹಸ್ತಾಂತರವಾಗದೇ ಒಂದು ವಿಶಿಷ್ಟ ರೀತಿಯಿಂದ ಹಸ್ತಾಂತರವಾಗುವದು. ಪ್ರಾರಂಭಕ್ಕೆ ಇದರಿಂದ ಅನೇಕ ಬಗೆಯ ತೊಂದರೆಗಳು ಉದ್ಭವಿಸಬಹುದು ಕಾಯ್ದೆಯ ಅರ್ಥವನ್ನು ಸರಿಯಾಗಿ ಮಾಡುವದು ನ್ಯಾಯಾಧೀಶರಿಗೂ ಕೂಡಾ ಜಟಿಲ ಅಂತಹ ಕಾಯ್ದೆಯನ್ನು ಸಾಮಾನ್ಯ ಜನರಿಗೆ ತಿಳಿಸಿ ಹೇಳುವದು ಅಷ್ಟೊಂದು ಸುಲಭವಲ್ಲ ಪ್ರತಿಯೊಂದು ಹಿಂದೂ ಕುಟುಂಬಕ್ಕೆ ಸಂಬಂಧಪಡುವ ಈ ಕಾಯ್ದೆಯು ಎಲ್ಲೆಡೆಯಲ್ಲಿಯೂ ಪ್ರಸಾರವಾಗುವದು ಅತ್ಯಂತ ಅವಶ್ಯವಿದೆ. ಇದನ್ನು ಪೂರ್ತಿಗೊಳಿಸುವದಕ್ಕಾಗಿ ಇಲ್ಲಿಯ ತರುಣ ಮತ್ತು ಕುಶಾಗ್ರ ಬುದ್ಧಿಯುಳ್ಳ ವಕೀಲರಾದ ಶ್ರೀ ನಾಯಪ್ಪಗೌಡ ಪಾಟೀಲ ಇವರು ಬರೆದ " ಹಿಂದೂ ವಾರಸಾ ಕಾಯದೆ " ಎಂಬ ಪುಸ್ತಕವನ್ನು ಪ್ರಕಟಿಸಲು ನನಗೆ ತುಂಬಾ ಸಂತೋಷವೆನಿಸುತ್ತದೆ. ಕಾಯದೆ ಪುಸ್ತಕಗಳನ್ನು ಕನ್ನಡ ಭಾಷೆಯಲ್ಲಿ ವಿಸ್ತೃತವಾಗಿ ಪ್ರಕಟಿಸುವದು ಸದ್ಯಕ್ಕೆ ಒಂದು ಬಗೆಯ ಸಾಹಸವೇ ಸರಿ ಈ ಪುಸ್ತಕದ ಪ್ರಕಟನಾ ಕಾರ್ಯವು ಸಂಪೂರ್ಣ ದೋಷರಹಿತವಾಗಿದೆಯೆಂದು ನಾವು ಹೇಳುವದಿಲ್ಲ ಆದರೆ ವಿಷಯ ಪ್ರತಿಪಾದನೆಯನ್ನು ಗ್ರಂಥಕರ್ತರು ಅತ್ಯಂತ ಶ್ರಮಪಟ್ಟು ತಿಳಿಯಾಗಿ ತಿಳಿಯುವಂತೆ ಮಾಡಿದ್ದಾರೆ. ನ್ಯಾಯಮೂರ್ತಿ ಶ್ರೀ. ನಿಟ್ಟೂರ ಶ್ರೀನಿವಾಸರಾಯರು ಓದಿ ಪ್ರಶಂಸನಾಪರ ಅಭಿಪ್ರಾಯ ಪಟ್ಟಿದ್ದಾರೆ. ಈ ಪುಸ್ತಕದ ಎರಡನೇ ಆವೃತ್ತಿಯನ್ನು ಪ್ರಕಟಿಸುವ ಪ್ರಸಂಗ ಬಂದಾಗ ದೋಷಗಳನ್ನು ತೆಗೆದು ತಜ್ಞರ ಸದಭಿಪ್ರಾಯಗಳನ್ನು ಕ್ರೋಡೀಕರಿಸಿ ಪ್ರಕಟಿಸುವೆವೆಂದು ಆಶ್ವಾಸನವನ್ನೀಯುವೆವು. ನಾವು ಪ್ರಕಟಿಸಬೇಕೆನ್ನುವ ಎಲ್ಲ ಕಾಯದೆ ಪುಸ್ತಕಗಳಿಗೆ ಜನತೆಯೂ ತಜ್ಞರೂ ಯೋಗ್ಯ ಸಲಹೆ ಸೂಚನೆಗಳನ್ನೀಯುತ್ತ ನಮ್ಮನ್ನು ಈ ಕಾರ್ಯದಲ್ಲಿ ಪ್ರೋತ್ಸಾಹಿಸಬೇಕೆಂದು ಬಿನ್ನವಿಸುವೆವು.

ನೊಹರೆ ಹಣಮಂತರಾಯ

# ಒಳಪಿಡಿ



— —

# ಒಪ್ಪೋಲೆ

| ಪುಟ-ಸಾಲು | ತಪ್ಪು | ಸರಿ |
| --- | --- | --- |
| ೯-೧ | ಅನ್ಯೃತ್ಯ ಲೇಖಿಯ | ಅನ್ಯೃತ್ಯಲೇಖೀಯ |
| ೨೦-೧೪ | ಜಾರೀ | ಜಾರಿಯ |
| ೨೧-೧೭ | ಅಥವಾ | ಅಥವಾ |
| ೧೮ | ಸಪೂಜೀಯ | ಸಮಾಜೀಯ |
| ೨೯-೮ | Vid Bom. | |
| " ೨೦ | Moors indcau Appals | Moor's Indian Appeals |
| ೩೭-೭ | Angate | Agnate |
| ೩೯-ಕೊನೆ | Intcrstate | Intestate |
| ೫೩-೨೦ | Ancentor | Ancestor |
| ೫೬-೨ | Devolue | Devolve |
| ೮೫-೧೬ | ಎಣಿಕ | ಎಣಿಕೆ |
| ೧೧೬-೨೧ | Descuncents | Descendants |
| ೧೨೨ | Intrest | Interest |
| ೧೨೬ | Liaolity | Liability |

# ಹಿಂದೂ ವಾರಸಾ ಕಾಯದೆ ೧೯೫೬

## (ಕಾಯಿದೆ ನಂಬರ ೩೦, ೧೯೫೬)

## (೧೭ ನೆಯ ಜೂನ ೧೯೫೬)

**ಹಿಂದುಗಳ ಅಮೃತ್ಯುಲೇಖಿಯ ವಾರಸಾಕ್ರಮಕೆ ಸಂಬಂಧಿಸಿದ ಕಾನೂನನ್ನು ತಿದ್ದುಪಡಿಮಾಡುವ ಮತ್ತು ಕ್ರೋಢೀಕರಿಸುವ ಕಾಯದೆ.**

**ಭಾರತೀಯ ಪ್ರಜಾರಾಜ್ಯದ ಏಳನೆಯ ವರ್ಷದಲ್ಲಿ ಸಂಸತ್ತು ಈ ಕೆಳಗಿನಂತೆ ಕಾಯಿದೆ ಮಾಡಿದೆ:—**

### ಟೀಕೆ

### ೧ ಕಾಯ್ದೆಯ ಕಾರಣೋದ್ದೇಶಗಳು

ಹಿಂದೂ ಕೋಡಿನ ಈ ವಿಭಾಗವು ಅಮೃತ್ಯುಲೇಖೀಯ ಹಿಂದೂ ವಾರಸಾ ಕ್ರಮವನ್ನು ಕುರಿತಾದ ಹಿಂದೂ ಕಾನೂನಿನಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಿ ಅದನ್ನು ಕ್ರೋಢೀಕರಿಸುತ್ತದೆ. ೧೯೪೭ ರಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಮೊದಲನೆಯದಾಗಿ ಚರ್ಚೆಗೆಬಂದ ರಾವ್ ಸಮಿತಿಯ ಹಿಂದೂ ಕೋಡಿನಕರಡು ಭಾರತೀಯ ಘಟನಾ ಸಮಿತಿಯ ಸಿಲೆಕ್ಟ ಕಮಿಟಿಯೊಂದಕ್ಕೆ ಒಪ್ಪಿಸಲ್ಪಟ್ಟಿತು (೧೯೪೮). ಸಿಲೆಕ್ಟ ಕಮಿಟಿಯು ೧೯೪೮ ನೆಯ ಅಗಸ್ಟ ೨೯ ನೆಯ ದಿನಾಂಕ ತನ್ನ ಪರಿಷ್ಕೃತ ಕರಡನ್ನು ತಯಾರಿಸಿ ಒಪ್ಪಿಸಿತು. ನಡುಗಾಲ ಸಂಸತ್ತಿನಲ್ಲಿ ಚರ್ಚೆಗೆಬಂದ ಈ ಕರಡು ಸಮಯಕ್ಕೆ ಸರಿಯಾಗಿ ಪಾಸಾಗಲಿಲ್ಲವಾದ್ದರಿಂದ ಅದು ಲುಪ್ತವಾಯಿತು.

ಭಾರತೀಯ ಪ್ರಥಮ ಸಂಸತ್ತಿನೆದುರು ಹಿಂದೂ ಕೋಡ ಬಿಲ್ಲನ್ನು ಇಡಿಯಾಗಿ ತೆಗೆದುಕೊಳ್ಳದೆ, ಭಾಗ ಭಾಗವಾಗಿ ಚರ್ಚಿಸಿ ಕಾಯಿದೆ ಮಾಡಬೇಕೆಂಬ ಅಭಿಪ್ರಾಯಕ್ಕೆ ಮನ್ನಣೆ ದೊರೆಯಿತು. ಅಂಥ ಪ್ರಥಮ ಭಾಗವಾಗಿ ಚರ್ಚೆಗೆಬಂದ ಹಿಂದೂ ಕಾನೂನನ್ನು ಕುರಿತಾದ ಏರ್ಪಾಡುಗಳು ಪ್ರಸ್ತುತ ಕಾಯದೆಯ ರೂಪತಾಳಿವೆ.

ಕಾಯಿದೆಯ ಕಲಮುಗಳು ಪ್ರಾರಂಭವಾಗುವ ಮುಂಚೆ ಪೀಠಿಕಾ ರೂಪವಾಗಿ ಕಾರಣೋದ್ದೇಶ ನಿರೂಪಕವಾದ ವಾಕ್ಯಗಳು ಕಾಣಿಸಿ ಕೊಳ್ಳುತ್ತವೆ. ಈ ಕಾರಣೋದ್ದೇಶ ವಾಕ್ಯಗಳು ಕಾಯಿದೆಯ ಕಲ ಮುಗಳ ಅರ್ಥವಿವರಣೆಗಾಗಿ ಮಾರ್ಗದರ್ಶಕವಾಗಬೇಕೆಂಬ ಉದ್ದೇಶ ವಿರುವದಿಲ್ಲ. ಆದರೆ, ವಿಶಿಷ್ಟ ಕಾಲದಲ್ಲಿ, ಯಾವ ಸನ್ನಿವೇಶದ ಕಾರಣದಿಂದ ಯಾವುದೇ ಮಸೂದೆಯನ್ನು ಮಂಡಿಸಲಾಯಿತೆಂದೂ, ಅಂಥ ಮಸೂದೆ ನಿವಾರಿಸ ಬಯಸಿದ ಅನ್ಯಾಯ ಯಾವುದೆಂದೂ ತಿಳಿದುಕೊಳ್ಳುವದಕ್ಕೋಸ್ಕರ ಕಾರಣೋದ್ದೇಶ ನಿರೂಪಕ ವಾಕ್ಯದ ಸಹಾಯ ಪಡೆಯಬಹುದೆಂದು ಭಾರತೀಯ ಸುಪ್ರೀಮ ಕೋರ್ಟು ರಂಗನಾಥನ್ ವಿ. ಮದ್ರಾಸರಾಜ್ಯ (AIR 1955 S C. 604) ಕೇಸಿನಲ್ಲಿ ವಿಧಿಸಿದೆ.

## ೨ ಬಿ ಎನ್. ರಾವ್ ಕಮೀಟಿಯಿಂದ ಜಾಯಿಂಟ ಕಮೀಟಿಯ ವರೆಗೆ

೧೯೪೮ರ ರಲ್ಲಿ ರಾವ್‌ಕಮೀಟಿ ತಯಾರಿಸಿದ ಹಿಂದೂ ಕೋಡ ಮಸೂದೆ ಅಂದಿನ ತಾತ್ಪೂರ್ತಿಕ ಸಂಸತ್ತಿನ ಸಿಲೆಕ್ಟಕಮೀಟಿಗೆ ಒಪ್ಪಿ ಸಲ್ಪಟ್ಟಿತಷ್ಟೆ. ಸಿಲೆಕ್ಟ ಕಮೀಟಿಯವರು ತಮ್ಮ ವರದಿಯಲ್ಲಿ ತಾವು ಸೂಚಿಸಿದ ಮಹತ್ವದ ಬದಲಾವಣೆಗಳನ್ನು ಕೆಳಗಿನಂತೆ ನಿರೂಪಿಸಿದ್ದಾರೆ:

" ಚಿಲ್ಲರೆ ಕರಡು ತಿದ್ದುಪಡಿಗಳಲ್ಲದೆ ಹಿಂದೂ ಗಂಡಸಿನ ಆಸ್ತಿಯ ವಾರಸಾ ವ್ಯವಸ್ಥೆಯಲ್ಲಿ ಕೆಳಗಿನ ಬದಲಾವಣೆಗಳನ್ನು ಮಾಡಿದ್ದೇವೆ.

(೧) ನಿರ್ದಿಷ್ಟ ವಾರಸದಾರರ ಪಟ್ಟಿಯಿಂದ ಪೌತ್ರಸಂತಾನ ವನ್ನು ಹೊರತುಪಡಿಸಿ ಉಳಿದೆಲ್ಲ ಎರಡು ತಲೆಯಾಚೆಯ ಸಂಬಂಧಿ ಕರನ್ನು ತೆಗೆದುಹಾಕಲಾಗಿದೆ.

(೨) ನಿರ್ದಿಷ್ಟ ವಾರಸದಾರರ ಪಟ್ಟಿಯಿಂದ ಪಿತೃ ಹಾಗೂ ಸೋದರರ ವಿಧವೆಯರನ್ನು ಹೊರತುಪಡಿಸಿ ಮಿಕ್ಕ ಗೋತ್ರಜರ ವಿಧ ವೆಯರನ್ನು ತೆಗೆದು ಹಾಕಲಾಗಿದೆ.

(೩) ನಾವು ಪ್ರಾಶಸ್ತ್ಯವಾರಸದಾರರೆಂದು ಕರೆಯುವ ನಿರ್ದಿಷ್ಟ ವಾರಸದಾರರಲ್ಲಿ, ವಾರಸದಾರನನ್ನು ಪ್ರೇಮ-ಮಮತೆಗಳಿಗನುಸಾರ

ವಾಗಿ ಪುನರ್ವ್ಯವಸ್ಥೆ ಮಾಡಿದ್ದೇವೆ. ಕೆಲವು ವಾರಸುದಾರರು ಏಕ ಕಾಲದಲ್ಲಿ ವಾರಸಾ ಪಡೆಯುವವರಿಕ್ಕೋಸ್ಕರ ಅವರನ್ನು ಒಂದೊಂದೇ ಗುಂಪಾಗಿ ವರ್ಗೀಕರಿಸಿದ್ದೇವೆ. ಉದಾಹರಣೆಗೆ, ಸೋದರ–ಸೋದರಿ ಯರು, ಮಾತಾ–ಪಿತೃಗಳು ಇತ್ಯಾದಿ.

(೪) ತಂದೆಯನ್ನುಳಿದ ಐದುತಲೆಯ ಸೀಮೆಯನ್ನು ವಿಧಿಸಿ, ಗೋತ್ರಜ ಇಲ್ಲವೆ ಬಾಂಧವ ವಾರಸಾದಾರರ ಸಂಖ್ಯೆಯನ್ನು ಸಂಕು ಚಿತ ಗೊಳಿಸಿದ್ದೇವೆ. ”

ಪ್ರಸ್ತುತ ಕಾಯಿದೆಯು ಬಹುತರವಾಗಿ ಸಿಲೆಕ್ಟ ಕಮೀಟಿಯ ಸೂಚನೆಗಳಿಗನುಸಾರವಾಗಿಯೇ ಇದ್ದು, ನಂತರದ ಜಾಯಿಂಟ ಕಮೀ ಟಿಯ ಅನೇಕ ಸೂಚನೆಗಳನ್ನು ಒಳಗೊಂಡಿದೆ. ಮೂಲ ಮಸೂದೆ ಯಲ್ಲಿ ಮಿತಾಕ್ಷರ ಏಕತ್ರ ಕುಟುಂಬದ ಆಸ್ತಿಯನ್ನು ಪ್ರಸ್ತುತ ಕಾಯಿದೆಯಿಂದ ಮುಕ್ತವಾಗಿಡಬೇಕೆಂದು ವಿಧಿಸಲಾಗಿತ್ತು. ಆದರೆ, ಜಾಯಿಂಟ ಕಮೀಟಿಯು ಪ್ರಸ್ತುತ ಕಾಯಿದೆಯ ೬ ನೆಯ ಕಲಮಿನ ಲ್ಲಡಕವಾದಂತೆ ಬದಲಾವಣೆಯನ್ನು ಸೂಚಿಸಿತು. ರಾಜ್ಯ ಸಭೆಯು ಮಿತಾಕ್ಷರ ಸಮಾಯಿಕ ಆಸ್ತಿಯಲ್ಲಿನ ಬಾಧ್ಯತೆ (interest) ಯನ್ನು ಮೃತ್ಯುಪತ್ರದ್ವಾರಾ ವರ್ಗಾಯಿಸಬಹುದೆಂದೂ ವಿಧಿಸಿದ್ದು, ಆ ಏರ್ಪಾಡನ್ನು ಪ್ರಸ್ತುತ ಕಾಯಿದೆಯ ೩೦ ನೆಯ ಕಲಮಿನ ವಿವ ರಣೆಯಲ್ಲಿ ಅಡಕಗೊಳಿಸಲಾಗಿದೆ.

ಸಂಸತ್ತಿನ ಜಾಯಿಂಟ ಕಮೀಟಿಯು ಮಸೂದೆಯಲ್ಲಿ ಮಾಡಿದ ಮುಖ್ಯ ಬದಲಾವಣೆಗಳನ್ನು ಕೆಳಗಿನಂತೆ ಸಂಕ್ಷೇಪಿಸಬಹುದು:

(೧) ಮಗ ಮತ್ತು ಮಗಳಿಗೆ ಸಮನಾದ ಪಾಲು ಸಿಗತಕ್ಕದ್ದು.

(೨) ಸ್ತ್ರೀಯರು ಪಡೆದ ಪಾಲಿನ ಆಸ್ತಿಯು ಸ್ವತಂತ್ರ (Ab- solute) ಆಸ್ತಿಯಾಗಿರತಕ್ಕದ್ದು. ಮತ್ತು ಸದ್ಯ ಹಿಂದೂ ಸ್ತ್ರೀಯ ಸೀಮಿತ ಆಸ್ತಿಯ ರೂಪದಲ್ಲಿರುವ ಹಕ್ಕುಗಳೆಲ್ಲ ಸ್ವತಂತ್ರ ಆಸ್ತಿಗಳೆಂದು ಪರಿಗಣಿಸಲ್ಪಡತಕ್ಕದ್ದು.

(೩) ಸ್ತ್ರೀ ವಾರಸದಾರರಿಗೆ ಮಿತಾಕ್ಷರ ಸಮಾಯಿಕ ಆಸಿ ಯಲ್ಲಿಯೂ ಪಾಲು ಸಿಗತಕ್ಕದ್ದು.

(೪) ಅಮೃತ್ಯುಲೇಖೀಯ(Intestate's)ನ ಎಷ್ಟೇ ದೂರದ ಗೋತ್ರಜ ಅಥವಾ ಬಾಂಧವ ವಾರಸದಾರರು ಆತನ ಆಸ್ತಿಗೆ ವಾರಸಾ ಹಕ್ಕು ಪಡೆದಿರತಕ್ಕದ್ದು.

(೯) ಮರುಮಕ್ಕತ್ತಾಯಂ, ಅಳಿಯ ಸಂತಾನ ಹಾಗೂ ನಂಬೂದ್ರಿ ಕಾನೂನು ಅನ್ವಯಿಸುವ ಆಸ್ತಿಗಳಿಗೂ ಪ್ರಸ್ತುತ ವಾರಸಾ ಕಾಯಿದೆ ಅನ್ವಯಿಸತಕ್ಕದ್ದು.

(೬) ಕಾಯಿದೆದ್ವಾರಾ ನಿರ್ಮಿತವಾದವುಗಳನ್ನು ಹೊರತುಪಡಿಸಿ, ಮಿಕ್ಕೆಲ್ಲ ಅವಿಭಾಜ್ಯ ಆಸ್ತಿಗಳು ನಿರ್ಮೂಲವಾಗಿವೆ.

(೭) ಅನೌರಸ ಸಂತತಿಯವರು ತಮ್ಮ ಪ್ರತೀತತಂದೆಗೆ ವಾರಸದಾರರೆನಿಸತಕ್ಕದ್ದು.

(೮) ತಾಯಿಯನ್ನು ಪರಿಶಿಷ್ಟದ ೧ ನೆಯ ವರ್ಗದ ವಾರಸದಾರಳೆಂದು ಪರಿಗಣಿಸತಕ್ಕದ್ದು.

ರಾಜ್ಯ ಸಭೆಯು ಒಕ್ಕಲತನದ ಹಿಡುವಳಿಗಳಲ್ಲಿನ ಗೇಣಿದಾರಿಕೆಯ ಹಕ್ಕಿನ ಅನುಪ್ರಾಪ್ತಿ (Devolution)ಯ ಕ್ರಮವು ರಾಜ್ಯ ಸರಕಾರಗಳ ಕಾಯಿದೆಗನುಸಾರವಾಗಿ ನಿರ್ಧಾರವಾಗಬೇಕೆಂದು ಇನ್ನೊಂದು ಬದಲಾವಣೆಮಾಡಿತು.

ಕೊನೆಗೆ ಮಸೂದೆಯು ಲೋಕಸಭೆಗೆ ಬಂದಾಗ ಲೋಕ-ಸಭೆಯು ೧ ನೇ ವರ್ಗದಲ್ಲಿನ ಸ್ತ್ರೀ ವಾರಸದಾರರು, ಮಿತಾಕ್ಷರ ಸಮಾಯಕ ಆಸ್ತಿಯಲ್ಲಿನ ಅವ್ಯತ್ಯುಲೇಖೀಯನ ಬಾಧ್ಯತೆಯಲ್ಲಿ ಮಾತ್ರ ಪಾಲು ಪಡೆಯತಕ್ಕದ್ದೆಂದು ವಿಧಿಸಲಾಯಿತು. ೩೦ ನೇ ಕಲಮಿಗೆ ೨ ನೇ ಉಪಕಲಮು ಕೂಡಿಸಿ, ವ್ಯತ್ಯುಲೇಖೀಯ ಆಸ್ತಿ ವ್ಯವಸ್ಥಾಪನೆಯಿಂದ ಸ್ತ್ರೀ ವಾರಸದಾರರ ಜೀವನಾಂಶದ ಹಕ್ಕಿಗೆ ಬಾಧೆ ಬರಲಾರದೆಂದೂ ಸ್ಪಷ್ಟಗೊಳಿಸಲಾಯಿತು.

## ೩ ಉದ್ದೇಶ ವ್ಯಾಪ್ತಿ

ಕಾಯಿದೆಯ ಉದ್ದೇಶ ಕಥನ ಮಾಡುವ ಪೀಠಿಕಾ ವಾಕ್ಯ (Preamble) ವು " ಹಿಂದುಗಳಲ್ಲಿನ ಅವ್ಯತ್ಯುಲೇಖೀಯ ವಾರಸಾ ಕುರಿತಾದ ಕಾನೂನನ್ನು **ತಿದ್ದುವ** ಮತ್ತು ಕ್ರೋಢೀಕರಿಸುವ " ಉದ್ದಿಷ್ಟದಿಂದ ಈ ಕಾಯ್ದೆ ಮಾಡಲಾಗುತ್ತಿದೆಯೆಂದು ಹೇಳುತ್ತದೆ. ಕಾರಣ ಹಿಂದುವಿನ ಜೀವಿತಾವಧಿಯಲ್ಲಿ ಈ ಕಾನೂನು ಆತನ ಆಸ್ತಿಗೆ ಅನ್ವಯಿಸುವ ಪ್ರಶ್ನೆಯುದ್ಭವಿಸಲಾರದು.

“ ಅಮೃತ್ಯು ಲೇಖೀಯ ವಾರಸಾ ಕ್ರಮ ” ವನ್ನು ಕುರಿತಾದ ಈ ಕಾಯ್ದೆಯಲ್ಲಿ ವಾರಸಾ ಅಲ್ಲದೆ ಬೇರೆ ವಿಷಯಗಳನ್ನು ಕುರಿತಾಗಿಯೂ ಶಾಸನ ಮಾಡಲಾಗಿದೆ. ಉದಾಹರಣೆಗೆ: [೧] ಮೃತ್ಯು ಲೇಖೀಯ ವಾರಸಾ ಕ್ರಮ, [೨] ಸ್ತ್ರೀಪ್ರಾಪ್ತ ಆಸ್ತಿಯ ಸ್ವತಂತ್ರ [ Absolute ] ಸ್ವರೂಪ, [೩] ಮೃತನ ಮಿತಾಕ್ಷರ ಸಾಮಾಯ ಕದಲ್ಲಿನ ಬಾಧ್ಯತೆಯು ಶೇಷಾಧಿಕಾರದ್ವಾರಾ ಅನುಪ್ರಾಪ್ತವಾಗು [Devolve] ವ ಬದಲು ಕೆಲವು ಸಲ ವಾರಸಾ ಕ್ರಮದಿಂದ ಅನುಪ್ರಾಪ್ತವಾಗುವಿಕೆ, ಹಾಗೂ [೪] ಮಿತಾಕ್ಷರ ಸಮಾಯಕದಲ್ಲಿನ ಬಾಧ್ಯತೆಯನ್ನು ಮೃತ್ಯುಪತ್ರದ್ವಾರಾ [by will] ವ್ಯವಸ್ಥೆ ಮಾಡುವ ಹಕ್ಕು- ಈಯೆಲ್ಲ ವಿಷಯಗಳ ಕುರಿತಾಗಿಯೂ ಪ್ರಸ್ತುತ ಕಾಯ್ದೆಯಲ್ಲಿ ಏರ್ಪಾಡುಗಳಿವೆ. ಆದ್ದರಿಂದ ಪಿಠಿಕಾ ವಾಕ್ಯವು ಕಾಯಿದೆಯ ಪ್ರಧಾನ ವಿಷಯಗಳನ್ನು ಮಾತ್ರ ಸುವ್ಯಕ್ತವಾಗಿ ಶ್ರುತ ಪಡಿಸಿದೆಯೆಂದು ತೋರುತ್ತದೆ.

ಹಿಂದೂ ವಾರಸಾ ಕ್ರಮಕ್ಕೆ ಸಂಬಂಧಿಸಿದ ಕಾನೂನನ್ನು ಕ್ರೋಢೀಕರಿಸ ಬಯಸುವ ಈ ಕಾಯದೆ ಪರಿಪೂರ್ಣವಾದ ಕ್ರೋಢೀಕರಣವೆಂದೂ ಹೇಳಲು ಬಾರದು. ಈ ಕಾಯದೆಯು, ೫ ನೆಯ ಕಲಮಿನಲ್ಲಿ ನಿರ್ದಿಷ್ಟವಾದ ಹಿಂದುಗಳ ಆಸ್ತಿಗಳಿಗಾಗಲಿ, ಅಥವಾ ರಾಜ್ಯ ಸರಕಾರಗಳು ಶಾಸನರೀತ್ಯಾ ನಿಯಮೀಕರಿಸಿದ ಒಕ್ಕಲತನದ ಗೇಣಿದಾರಿಕೆಗಳಿಗಾಗಲಿ ಅನ್ವಯಿಸಲಾರದು.

ಕ್ರೋಢೀಕರಣದೊಂದಿಗೆ ಈ ಕಾಯ್ದೆ ಹಿಂದುಗಳ ವಾರಸಾ ಕ್ರಮಕ್ಕೆ ಸಂಬಂಧಿಸಿ ತಿದ್ದು ಪಡಿಗಳನ್ನು ಮಾಡಲುದ್ದೇಶಿಸಿದೆ. ಆ ಪ್ರಕಾರ ಪ್ರಸ್ತುತ ಕಾಯ್ದೆಯು ಹಿಂದೂ ವಾರಸಾ ಕ್ರಮದಲ್ಲಿ ಕೆಳಕಾಣಿಸಿದ ಮಹತ್ವದ ತಿದ್ದು ಪಡಿಗಳನ್ನು ಮಾಡಿದೆ.

[೧] ವಾರಸಾಕ್ಕೆ ಸಂಬಂಧಿಸಿದ ದಾಯಭಾಗ ಹಾಗೂ ಮಿತಾಕ್ಷರಗಳೆಂಬ ಹಿಂದೂ ಕಾನೂನಿನ ಸಂಪ್ರದಾಯಗಳನ್ನು ಈ ಕಾಯ್ದೆ ಕೊನೆಗೊಳಿಸಿದೆ: ( ಕ. ೮ ).

[೨] ದಕ್ಷಿಣ ಭಾರತದ ಮಾತೃಪ್ರಧಾನ ಸಮಾಜಗಳ ವಾರಸಾ ಕ್ರಮಕ್ಕೆ ಸಂಬಂಧಿಸಿದ ಅನೇಕ ಕಾಯದೆಗಳು ಈ ಕಾಯದೆಯ ಮೂಲಕ ರದ್ದಾಗುತ್ತದೆ ( ಕ. ೭ ).

[೩] ಸ್ತ್ರೀಧನದ ವಿವಿಧ ಪ್ರಕಾರಗಳನ್ನೂ ತದನುಸಾರವಾದ ವಾರಸಾ ಕ್ರಮಗಳನ್ನೂ, ಈ ಕಾಯ್ದೆ ರದ್ದುಗೊಳಿಸುತ್ತದೆ. (ಕ. ೧೫).

[೪] ಈ ಕಾಯದೆಯಿಂದ ಸ್ತ್ರೀಯರು ಪಡೆಯುವ ಆಸ್ತಿಯೆಲ್ಲ ಸ್ವತಂತ್ರ (Absolute) ಆಸ್ತಿಯೆನಿಸುತ್ತವೆ. ಸದ್ಯದಲ್ಲಿ ಸೀಮಿತ ಆಸ್ತಿ (Limitited Estate ) ಯಾಗಿರುವ ಆಸ್ತಿಗಳೂ ಈ ಕಾಯ್ದೆ ಯಿಂದ ಸ್ವತಂತ್ರ ಆಸ್ತಿಗಳೆನಿಸುತ್ತದೆ. (ಕ. ೧೪)

[೫] ಶಾಸನ ನಿರ್ಮಿತವಲ್ಲದ ಅವಿಭಾಜ್ಯ ಆಸ್ತಿ ( Impart ible Estaste) ಗಳು ಈ ಕಾಯ್ದೆಯಿಂದ ಕೊನೆಗೊಳ್ಳುತ್ತವೆ.(ಕ೫).

[೬] ಈ ಕಾಯ್ದೆಯಿಂದ ಹಿಂದೂ ಗಂಡಸಿನ ಆಸ್ತಿಯ ವಾರಸಾ ಕ್ರಮವು ಭಾರತದಾದ್ಯಂತ ಏಕರೂಪವಾಗುತ್ತದೆ. ಮರುಮಕ್ಕತ್ತಯಂ ಹಾಗೂ ಅಳಿಯ ಸಂತಾನ ಕಾನೂನು ಅನ್ವಯಿಸುತ್ತಿದ್ದವರಿಗೆ ಸಂಬಂಧಿಸಿ ದಂತೆ ಕೆಲವು ಅಲ್ಪ ವ್ಯತ್ಯಾಸಗಳು ಮಾತ್ರ ಜಾರಿಯಲ್ಲು ಳಿ ಯುತ್ತವೆ. (ಕ. ೧೭) ಅದೇ ರೀತಿಯಾಗಿ ಹಿಂದೂ ಸ್ತ್ರೀಯರ ಆಸ್ತಿಯ ವಾರಸಾ ಕ್ರಮವೂ ಬಹುತರ ಏಕರೂಪವಾಗುತ್ತದೆ. (ಕ. ೧೫).

[೭] ವಾರಸಾ ಪ್ರಾಶಸ್ತ್ಯಕ್ರಮದಲ್ಲಿ ಈ ಕಾಯ್ದೆಯು ಪ್ರೇಮ-ಮಮತೆಗಳನ್ನೇ ಪ್ರಮಾಣವಾಗಿ ಸ್ವೀಕರಿಸಿದ್ದು ದಾಯಭಾಗ ಸಂಪ್ರದಾಯವು ಅನುಸರಿಸುತ್ತಿದ್ದ ಪಿಂಡಾಧಿಕಾರ (Religious Efficacy) ಪ್ರಮಾಣವನ್ನೂ ಹಾಗೂ ಮಿತಾಕ್ಷರ ಸಂಪ್ರದಾಯದ ಸಾಪಿಂಡ್ಯ (Propinquity of blood) ಪ್ರಮಾಣವನ್ನೂ ನಿರಾಕರಿಸಲಾಗಿದೆ.

[೮] ಈ ಕಾಯ್ದೆ ವಿಧಿಸುವ ಪ್ರಾಶಸ್ತ್ಯಕ್ರಮವು ಸುಲಭವೂ ಸ್ಪಷ್ಟವೂ ಆಗಿದ್ದು, ಪ್ರಾಶಸ್ತ್ಯ ದುಷ್ಕರವಾದಲ್ಲಿ ಏಕ ಕಾಲೀನ ವಾರಸಾ ಪ್ರಾಪ್ತಿಯನ್ನು ವಿಧಿಸಲಾಗಿದೆ.

[೯] ಎಷ್ಟೇ ದೂರದ ಸಂಬಂಧವುಳ್ಳವರಾಗಿದ್ದರೂ, ಗೋತ್ರಜ ಹಾಗೂ ಬಾಂಧವರೆಲ್ಲ ಈ ಕಾಯ್ದೆಯಿಂದ ಮೃತನ ಆಸ್ತಿಯಲ್ಲಿ ವಾರಸಾ ಹಕ್ಕು ಪಡೆಯುತ್ತಾರೆ. ಯಾರನ್ನೂ ದೂರ ಸಂಬಂಧಿಕರೆಂಬ ಕಾರಣ ದಿಂದ ವಾರಸಾ ಹಕ್ಕಿಗೆ ಎರವು ಮಾಡಿಲ್ಲ.

[೧೦] ಸ್ತ್ರೀ ಮತ್ತು ಪುರುಷ ವಾರಸದಾರರಲ್ಲಿ ಯಾವ ಭೇದ ವನ್ನೂ ಎಣಿಸಲಾಗಿಲ್ಲ. ಕೆಲವು ಸ್ತ್ರೀ ವಾರಸದಾರರಿಗೆ ಮೃತನ ಮಿತಾ

ಕ್ಷರ ಆಸ್ತಿಯಲ್ಲಿನ ಅವಿಭಕ್ತ ಬಾ ವಾರಸಾ ಹಕ್ಕು ಪ್ರಾಪ್ತವಾಗು ವಂತೆ ಏರ್ಪಾಡು ಮಾಡಲಾಗಿದೆ. (ಕ. ೬)

[೧೧] ಈ ಕಾಯ್ದೆಯನ್ವಯ, ರೋಗ, ದೌರ್ಬಲ್ಯ ಅಥವಾ ಅಂಗವಿಕಲತೆಗಳು ವಾರಸಾ ಹಕ್ಕಿಗೆ ಬಾಧಕವೆನಿಸಲಾರವು. (ಕ. ೨೮)

[೧೨] ಮಿತಾಕ್ಷರ ಸಮಾಯಿಕ ಆಸ್ತಿಯಲ್ಲಿಯ ತನ್ನ ಬಾಧ್ಯತೆ ಯನ್ನು ಮೃತ್ಯುಪತ್ರದ್ವಾರಾ ಮಾಡಲು ಹಿಂದುವಿಗೆ ಈ ಕಾಯ್ದೆಯಿಂದ ಹಕ್ಕು ದೊರೆಯುತ್ತದೆ. (ಕ. ೩೦)

ಈ ರೀತಿಯಾಗಿ ಪೀಠಿಕಾ ವಾಕ್ಯದಲ್ಲಿ ಸೂಚಿತವಾದಂತೆ ಈ ಕಾಯ್ದೆಯ ಮೂಲಕ ಹಿಂದೂ ಕಾನೂನಿನಲ್ಲಾದ ಬದಲಾವಣೆಗಳು ಅತ್ಯಂತ ಪ್ರಗತಿ ಪರವಾಗಿದ್ದು ವಾರಸಾ ಕ್ರಮದಲ್ಲಿ ಸ್ತ್ರೀ ಹಾಗೂ, ಪುರುಷರಲ್ಲಿ ಯಾವ ವ್ಯತ್ಯಾಸವೂ ಇರಕೂಡದೆಂಬ ಭಾವನೆ ಶಾಸನ ಕರ್ತರಲ್ಲಿದ್ದುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

## ೪ ಪೀಠಿಕಾ ವಾಕ್ಯದ ಮಾರ್ಗದರ್ಶನ

ಯಾವುದೇ ಶಾಸನದ ಅರ್ಥವಿವರಣೆ ( Interpretation) ಯ ನ್ಯಾಯಾಸ್ಥಾನಗಳು ಕಾಯಿದೆಯ ಪೀಠಿಕಾವಾಕ್ಯದ ನೆರವು ಪಡೆಯಬಹುದೆ ? ಪಡೆಯಬಹುದಾದರೆ ಎಂಥ ಸನ್ನಿವೇಶದಲ್ಲಿ ಪಡೆಯ ಬಹುದು ?

ಎರಡು ಪ್ರಕಾರದ ಸನ್ನಿವೇಶಗಳಲ್ಲಿ ಕಾಯಿದೆಯ ಪೀಠಿಕಾವಾಕ್ಯದ ನೆರವು ಪಡೆಯಬೇಕಾಗುತ್ತದೆ: ಮೊದಲನೆಯದಾಗಿ, ಕಾಯಿದೆಯ ಪಾಠವು ವಿವಿಧಾರ್ಥಗಳನ್ನು ಕೊಡುವಂತಿರುವಾಗ; ಎರಡನೆಯದಾಗಿ ಶಾಸನದ ಕಾರ್ಯ ವ್ಯಾಪ್ತಿಯನ್ನು ಪೀಠಿಕಾ ವಾಕ್ಯದ ಸಹಾಯದಿಂದ ನಿಯಂತ್ರಿಸುವ ಸಾಧ್ಯತೆಯಿರುವಾಗ ( ಕನ್ನಮ್ಮಾಳ್ ವಿ. ಕನಕಸಬಾಯಿ 54 Mad 845, 847 ). ಮುಂಬಯಿ ಹೈಕೋರ್ಟಿನ ತಾಹೆರಲ್ಲಿ ವಿ. ಚನಬಸಪ್ಪಾ 45 B. L. R. 422, 423 ಪ್ರಕರಣದಲ್ಲೂ ಇವೇ ಆಶಯ ವ್ಯಕ್ತವಾಗಿದೆ.

ಆದರೆ, ಪೀಠಿಕಾ ವಾಕ್ಯವು ಶಾಸನ ( Enactment) ದ ಭಾಗವಲ್ಲವೆಂಬುದನ್ನು ( ಬಾಬಿನ ಮಾಯಾಚಾ,ವಿ. ನಾಗೂಶ್ರವೂಚಾ 2 Bom 19 39 ) ಮಾತ್ರ ಗಮನಿಸಕ್ಕದ್ದು. ಕಾರಣ ಪೀಠಿಕಾ ವಾಕ್ಯವು ಶಾಸನದಲ್ಲಿ ಅಡಕವಾದ ಪ್ರಧಾನಾಂಶಗಳನ್ನು ನಿಯಂತ್ರಿಸ

ಲಾರದು. ಕಲಮುಗಳ ಅರ್ಥವಿವರಣೆಗೆ ಪೀಠಿಕೆಯೊಂದು ಕೈದೀಪ. ಕಲಮುಗಳು ಅಸ್ಪಷ್ಟವಿರುವಾಗ ಅಥವಾ ಕಾಯ್ದೆಯ ಕಾರ್ಯವ್ಯಾಪ್ತಿಯನ್ನು ಕುರಿತು ಸ್ಪಷ್ಟವಿಧಾನಗಳು ಕಂಡು ಬರದಿರುವಾಗ ಪೀಠಿಕಾ ವಾಕ್ಯ ಕೆಲಮಟ್ಟಿಗೆ ಮಾರ್ಗದರ್ಶನ ಮಾಡಬಹುದು. ಆದರೆ ಶಾಸನದ ಕಲಮುಗಳು ಅತ್ಯಂತ ಸರಳವೂ ಸ್ಪಷ್ಟವೂ ಆಗಿರುವಾಗ ಪೀಠಿಕಾ ವಾಕ್ಯದ ನೆರವು ಪಡೆಯಲು ಬರಲಾರದು. (ಕಾದಿರಬಕ್ಷ ವಿ. ಭವಾನಿ ಪ್ರಸಾದ 14 All 145). ಅಂಥ ನೆರವಿನಿಂದ ಶಾಸನದ ವ್ಯಾಪ್ತಿಯಲ್ಲಿ ಯಾವುದೇ ಸಂಕುಚನ ಅಥವ ವಿಸ್ತರಣವನ್ನು ಅರ್ಥಯಿಸಲಾಗದು.

ಆದರೆ, ಯಾವದೇ ಶಾಸನದ ಭಾಷೆಯು, ಸಾಮಾನ್ಯ ಅರ್ಥದ ಇಲ್ಲವೆ ವ್ಯಾಕರಣ ರಚನೆಯ ದೃಷ್ಟಿಯಿಂದ, ಕಾಯಿದೆಯ ಸಾಮಾನ್ಯ ಉದ್ದೇಶಕ್ಕೆ ಸ್ಪಷ್ಟವಾಗಿ ವ್ಯತಿರಿಕ್ತವೆನಿಸುವ ಅರ್ಥವನ್ನು ಕೊಡುತ್ತಿದ್ದರೆ, ಅಥವಾ ಯಾವುದೇ ಪ್ರತಿಕೂಲತೆ, ಅಸಂಬದ್ಧತೆ, ತೊಂದರೆ ಇಲ್ಲವೆ ಅನ್ಯಾಯಗಳಿಗೆ ಎಡೆ ಮಾಡುತ್ತಿದ್ದರೆ, ಅಂಥ ಪ್ರಸಂಗದಲ್ಲಿ ಶಾಸನದ ಭಾಷೆಗೆ ಸಾಮಾನ್ಯಾರ್ಥ ಅಥವಾ ವ್ಯಾಕರಣ ರಚನೆಗೆ ವ್ಯತಿರಿಕ್ತವಾದ ಅರ್ಥವನ್ನು ಕೊಡಬಹುದೆಂದು ಭಾರತೀಯ ಸುಪ್ರೀಂ ಕೋರ್ಟಿನವರು ತೀರ್ಥಸಿಂಗ ವಿ. ಬ. ಚಿತ್ತರ್‌ಸಿಂಗ್ A. I. R. 1955 S. C 830 ಪ್ರಕರಣದಲ್ಲಿ ವಿಧಿಸಿದ್ದಾರೆ.

ಅಂತೂ, ಪೀಠಿಕಾ ವಾಕ್ಯವು ಶಾಸನದ ಭಾಗವಲ್ಲವಾದ್ದರಿಂದ ಅದನ್ನು ಶಾಸನದ ಕಾರ್ಯವ್ಯಾಪ್ತಿಯ ಸಂಕುಚನ ಇಲ್ಲವೆ ವಿಸ್ತರಣದಲ್ಲಿ ಪರಿಣಮಿಸುವ ಅರ್ಥವಿವರಣೆ ಮಾಡುವುದಕ್ಕಾಗಿ ಉಪಯೋಗಿಸಲಾಗದು. ಶಾಸನ ಭಾಷೆಯು ಅನೇಕಾರ್ಥಪರವಾಗಲಿ, ಇಲ್ಲವೆ ಸಂದಿಗ್ಧವಾಗಲಿ ಇರುವಾಗ ಅರ್ಥನಿಶ್ಚಯಕ್ಕಾಗಿಯೂ, ಕಾರ್ಯವ್ಯಾಪ್ತಿಯ ಪರಿಸೀಮನಕ್ಕಾಗಿಯೂ ಪೀಠಿಕಾ ವಾಕ್ಯವನ್ನು ಅರ್ಥವಿವರಣೆಯಲ್ಲಿ ಮಾರ್ಗದರ್ಶಕವಾಗಿ ಸ್ವೀಕರಿಸಬಹುದು. ಆದರೆ, ಅಂಥ ಸಹಾಯ ಯಾಚನೆಯಿಂದ ಶಾಸನದ ಪ್ರಧಾನಾಂಶಗಳಿಗೆ ಬಾಧೆ ಬರದಂತೆ ಜಾಗರೂಕತೆ ವಹಿಸತಕ್ಕದ್ದು.

ಶಾಸನದ ಭಾಷೆ ಸ್ಪಷ್ಟವಾಗಿದ್ದು ಅದರ ಅರ್ಥ, ಶಾಸನದ ಒಟ್ಟಿನ ಉದ್ದೇಶಕ್ಕೆ ತೀರ ವಿರುದ್ಧವಾಗುವುದೆಂದು ಕಂಡು ಬಂದರೆ, ಅಂಥ ಪ್ರಸಂಗದಲ್ಲಿ ಭಾಷೆಯ ಸಾಮಾನ್ಯಾರ್ಥ ಹಾಗೂ ವ್ಯಾಕರಣ ರಚನೆಗೆ ವ್ಯತಿರಿಕ್ತವಾಗಿ ಶಾಸನ ಭಾಷೆಯನ್ನು ಅರ್ಥೀಕರಿಸಬಹುದು.

# ಅಧ್ಯಾಯ ೧

## ಪ್ರಾಸ್ತಾವಿಕ

### ಕ. ೧

ಸಂಕ್ಷಿಪ್ತ ಹೆಸರು ಮತ್ತು ವ್ಯಾಪ್ತಿ

[೧] ಈ ಕಾಯ್ದೆಯನ್ನು ಹಿಂದೂ ವಾರಸಾ ಕಾಯದೆ ೧೯೫೬ ಎಂದು ಕರೆಯ ಬಹುದು.

[೨] ಇದು ಜಮ್ಮು-ಕಾಶ್ಮೀರ ರಾಜ್ಯವನ್ನು ಹೊರತು ಪಡಿಸಿ ಇಡೀ ಭಾರತಕ್ಕೆ ಅನ್ವಯಿಸುತ್ತದೆ.

ಟೀಕೆ

### ೫ ಹೆಸರು

"ಹಿಂದೂ ವಾರಸಾ ಕಾಯ್ದೆ" ಎಂದು ಕರೆಯಲ್ಪಡುವ ಈ ಶಾಸನವು ಮೃತ್ಯುಪತ್ರ ಅಥವಾ ಇತರ ಯಾವುದೇ ಸ್ವರೂಪದ ಮೃತ್ಯುಲೇಖವನ್ನು ಮಾಡದೆ ಮೃತರಾದ ಅರ್ಥಾತ್ ಅಮೃತ್ಯುಲೇಖೀಯ (Intestate) ರಾದ ಹಿಂದೂಗಳ ಆಸ್ತಿಗೆ ವಾರಸಾಕ್ರಮವೇನೆಂಬುದನ್ನು ವಿಧಿಸುತ್ತದೆ. ಹೆಸರಿನಲ್ಲಿಯ "ಹಿಂದೂ" ಪದಕ್ಕೆ ಯಾವುದೇ ಧಾರ್ಮಿಕ, ಅಥವಾ ಜಾತೀಯ ಅರ್ಥವಿಲ್ಲ. ಕಾಯ್ದೆಯ ಎರಡನೆಯ ಕಲಮಿನಲ್ಲಿ "ಹಿಂದೂ" ಪದದ ವ್ಯಾಖ್ಯೆಯಿದ್ದು, ಅದರಲ್ಲಿ ಧರ್ಮದಿಂದ 'ಹಿಂದು' ಗಳೆನ್ನಲಾಗದ ಬೌದ್ಧ, ಜೈನ, ಸೀಖ ಮೊದಲಾದ ಧರ್ಮೀಯರೂ ಸಮಾವಿಷ್ಟರಾಗಿದ್ದಾರೆ. ಪಾರಸಿ, ಕ್ರೈಸ್ತ, ಯೆಹೂದ್ಯ ಹಾಗೂ ಮುಸಲ್ಮಾನ ಧರ್ಮೀಯರನ್ನು ಬಿಟ್ಟು ಮಿಕ್ಕ ಬಹುತರ ಯಾವತ್ತೂ ಭಾರತೀಯ ನಾಗರಿಕರಿಗೆ ಸಾಮಾನ್ಯವಾಗಿ ಈ ಕಾಯ್ದೆ ಅನ್ವಯಿಸುತ್ತದೆ. ಈ ಸಾಮಾನ್ಯ ಅನ್ವಯದಿಂದ ಮುಕ್ತತೆ ಪಡೆಯ ಬಯಸುವವರು, ಈ ಕಾಯ್ದೆ ಪಾಸಾಗದಿದ್ದಲ್ಲಿ ಪ್ರಚಲಿತ ಹಿಂದೂ ಕಾಸೂನು (Hindu Law) ವಿಶಿಷ್ಟ ಪದ್ಧತಿ (usage) ಅಥವಾ ರೂಢಿ (custom) ಯ ಬಲದಿಂದ ತಮಗೆ ಅನ್ವಯಿಸುತ್ತಿರಲಿಲ್ಲವೆಂದು ಪ್ರಸ್ಥಾಪಿಸಬೇಕಾಗಿದೆ.

## ೬ ಪ್ರಾದೇಶಿಕವ್ಯಾಪ್ತಿ

ಈ ಕಾನೂನಿನ ಅನ್ವಯ ಕ್ಷೇತ್ರವು ಜಮ್ಮು-ಕಾಶ್ಮೀರ ಪ್ರದೇಶವನ್ನು ಬಿಟ್ಟು ಮಿಕ್ಕ ಯಾವತ್ತೂ ಭಾರತೀಯ ಪ್ರದೇಶವನ್ನೊಳಗೊಳ್ಳುತ್ತದೆ. ೧೯೫೬ ರ ರಾಜ್ಯ ಪುನರ್ಘಟನಾ ಕಾಯ್ದೆಯ ೧೨ ನೆಯ ಕಲಮು ಭಾರತೀಯ ಸಂವಿಧಾನದ ಪ್ರಥಮ ಪರಿಶಿಷ್ಟವನ್ನು ತಿದ್ದುಪಡಿಮಾಡಿದ್ದು, ತಿದ್ದುಪಡಿಯಾದ ಪರಿಶಿಷ್ಟದನ್ವಯ ಭಾರತೀಯ ಒಕ್ಕೂಟದಲ್ಲಿ ಕೆಳಗಿನ ಅ, ಬ ಹಾಗೂ ಕ ವಿಭಾಗದ ರಾಜ್ಯಗಳು ಸಮಾವೇಶವಾಗುತ್ತವೆ.

(೧) **ಅ ವಿಭಾಗದ ರಾಜ್ಯಗಳು:—** ೧) ಆಂಧ್ರಪದೇಶ ೨) ಅಸ್ಸಾಮ ೩) ಬಿಹಾರ ೪) ಬೊಂಬಾಯಿ ೫) ಕೇರಳ ೬) ಮಧ್ಯಪ್ರದೇಶ ೭) ಮದ್ರಾಸ ೮) ಮೈಸೂರ ೯) ಓರಿಸ್ಸಾ ೧೦) ಪಂಜಾಬ ೧೧) ರಾಜಸ್ಥಾನ ೧೨) ಉತ್ತರ ಪ್ರದೇಶ ೧೩) ಪಶ್ಚಿಮ ಬಂಗಾಲ.

**'ಬ' ವಿಭಾಗದ ರಾಜ್ಯಗಳು:—** ಜಮ್ಮು...ಕಾಶ್ಮೀರ.

ಕ ವಿಭಾಗದ ರಾಜ್ಯಗಳು:— ೧) ದಿಲ್ಲಿ ೨) ಹಿಮಾಚಲ ಪ್ರದೇಶ ೩) ಮಣಿಪುರ ೪) ತ್ರಿಪುರಾ ೫) ಲಕದೀಪ, ಮಿನಿಕಾಯ್ ಮತ್ತು ಅಮೀನ ದಿಪ ದ್ವೀಪಗಳು.

## ೭ ಜಮ್ಮು—ಕಾಶ್ಮೀರ

ಭಾರತೀಯ ಒಕ್ಕೂಟದ 'ಬ' ವಿಭಾಗದ ರಾಜ್ಯವಾಗಿರುವ ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಈ ಕಾಯ್ದೆಯ ಅನ್ವಯದಿಂದ ಹೊರತು ಪಡಿಸಲಾಗಿದೆ. ಯಾಕಂದರೆ, ಜಮ್ಮು-ಕಾಶ್ಮೀರ ರಾಜ್ಯವು ವಿಲಯನ ಪತ್ರ (Instrument of Acession) ವೊಂದರ ಮೂಲಕ ಭಾರತೀಯ ಒಕ್ಕೂಟವನ್ನು ಪ್ರವೇಶಿಸಿದ್ದು ಅದಕ್ಕನುಸಾರವಾಗಿ ಭಾರತೀಯ ಸಂವಿಧಾನದ ಆರ್ಟಿಕಲ್ (೧) ಮತ್ತು (೩೭೦) ಮಾತ್ರ ಜಮ್ಮು-ಕಾಶ್ಮೀರಕ್ಕೆ ಅನ್ವಯಿಸುತ್ತವೆ. ಆರ್ಟಿಕಲ್ ೩೭೦ ರ ೧ ನೆಯ ಕ್ಲಾಜಿನ ಪ್ರಕಾರ ಭಾರತೀಯ ಪ್ರಜಾರಾಜ್ಯದ ಅಧ್ಯಕ್ಷರು ೧೯೫೦ ರಲ್ಲಿ ಹೊರಡಿಸಿದ ಜಮ್ಮು-ಕಾಶ್ಮೀರ ಕುರಿತಾದ ಸಂವಿಧಾನಾನ್ವಯಾಜ್ಞೆಯು ಆ ರಾಜ್ಯಕ್ಕೆ ಅನ್ವಯಿಸುವ ಸಂವಿಧಾನದ ಆರ್ಟಿಕಲುಗಳನ್ನು ನಿರ್ದಿಷ್ಟ ಪಡಿಸಿದೆ. ಹಾಗೆ ನಿರ್ದಿಷ್ಟವಾದ ಯಾದಿಯಲ್ಲಿ ಭಾರತೀಯ ಸಂವಿಧಾನದಲ್ಲಿ ೭ ನೆಯ ಪರಿಶಿಷ್ಟದ ೩ ನೆಯ ಯಾದಿ (Concurrent List) ಯಲ್ಲಿನ ೫ ನೆಯ ವಿಷಯ ಸಮಾವೇಶವಾಗಿಲ್ಲ: ಈ

೫ ನೆಯ ವಿಷಯ ವಾರಸಾಕ್ರಮಕ್ಕೆ ಸಂಬಂಧಿಸಿವೆ. ಫಲವಾಗಿ ಭಾರತೀಯ ಸಂಸತ್ತಿನ ಶಾಸನರಚನೆಯ ಅಧಿಕಾರವು ಈ ವಿಷಯಗಳಲ್ಲಿ — ಎಂದರೆ ವಾರಸಾ ವಿಷಯಗಳಲ್ಲಿ—ಜಮ್ಮು-ಕಾಶ್ಮೀರಕ್ಕೆ ಅನ್ವಯಿಸುವದಿಲ್ಲ.

## ೮ ಪ್ರದೇಶಾತೀತ ಶಾಸನಾನ್ವಯ

ಭಾರತದ ಹೊರಗೆ ನೆಲಸಿದ ಭಾರತೀಯರ ಆಸ್ತಿಗಳಿಗೆ ಈ ಕಾಯ್ದೆ ಅನ್ವಯಿಸುವುದೋ ಇಲ್ಲವೋ ಎಂಬ ಬಗ್ಗೆ ಈ ಶಾಸನದಲ್ಲಿ ಏರ್ಪಾಡು ಕಂಡುಬರುವದಿಲ್ಲ. ಯಾಕಂದರೆ ಅಂಥವರ ಆಸ್ತಿಗಳ ವಾರಸಾ ಕ್ರಮಕ್ಕೆ ಸಂಬಂಧಿಸಿ ಅಂತರ ರಾಷ್ಟ್ರೀಯ ಕಾನೂನಿನಲ್ಲಿ ಸ್ಪಷ್ಟವಾದ ತತ್ವಗಳು ಉಪಲಬ್ಧವಿವೆ. ಕಾರಣ ಆ ವಿಷಯಕ್ಕೋಸ್ಕರ ಕಾಯ್ದೆಯಲ್ಲಿ ವಿಶೇಷ ಏರ್ಪಾಡು ಮಾಡುವದು ಅನವಶ್ಯ ಹಾಗೂ ಅಪ್ರಸ್ತುತವೆಂದು ಜಾಯಿಂಟ ಕಮೀಟಿ ಅಭಿಪ್ರಾಯ ಪಟ್ಟಿತು.

ಸ್ಥಾವರ ಆಸ್ತಿಗೆ ಸಂಬಂಧಿಸಿದ ವ್ಯಕ್ತಿಯೊಬ್ಬನಿಗಿರುವ ಯಾವತ್ತೂ ಹಕ್ಕುಗಳು, ಅಂಥ ಆಸ್ತಿ ನೆಲಸಿರುವ ದೇಶದ ಕಾನೂನಿನ ನಿಯಂತ್ರಣಕ್ಕೊಳಪಟ್ಟಿವೆಯೆಂಬ ತತ್ವವು ಬಹುತರ ಎಲ್ಲ ಶಾಸನ ತಜ್ಞರಿಗೆ ಸಮ್ಮತವೆನಿಸಿದೆ (ಕೇಷ್ವಾಜಿ ವಿ. ಕೈಖುಸು, 31 Bom. L R. 1081, 1083 ) ಜಂಗಮ ಆಸ್ತಿಗೆ ಸಂಬಂಧಿಸಿದ ಹಕ್ಕುಗಳು ಹಕ್ಕುದಾರನ ರಹವಾಸ (Domicile) ದ ಕಾನೂನಿನ ನಿಯಂತ್ರಣಕ್ಕೊಳಪಟ್ಟಿವೆ.

ಹಿಂದೂ ಮೃತನೊಬ್ಬನು ಭಾರತದ ಹೊರಗೆ ಆಸ್ತಿ ಬಿಟ್ಟು ಸತ್ತಿದ್ದರೆ, ಅಂಥ ಆಸ್ತಿಯ ವಾರಸಾ ಹಕ್ಕು ಸ್ಥಳೀಯ ಕಾನೂನಿ (lex loci rei sitae) ನನ್ವಯ ನಿರ್ಧಾರವಾಗುತ್ತವೆ. ಕಾರಣ ಸ್ಥಾವರ ಆಸ್ತಿ ನೆಲಸಿರುವ ಆಯಾಯಾ ದೇಶಗಳ ವಾರಸಾ ಕಾನೂನನ್ನು ನ್ಯಾಯಾಲಯವು ಸಂಶೋಧಿಸಿ, ಆಯಾ ಆಸ್ತಿಗಳಿಗೆ, ಯಾರು ವಾರಸಾದಾರರಾಗುವರೆಂಬುದನ್ನು ಕಂಡು ಹಿಡಿಯತಕ್ಕದ್ದು, (ಉಮಾಯಾಳ್ ವಿ. ಲಕ್ಷ್ಮೀ ಅಚಿ AIR 1944 Mad 340 ).

ಭಾರತದ ಹೊರಗೆ ವಾಸವಾಗಿದ್ದ ಹಿಂದುವೊಬ್ಬನು ಭಾರತದಲ್ಲಿ ಸ್ಥಾವರ ಆಸ್ತಿಯನ್ನು ಬಿಟ್ಟು ಮೃತನಾಗಿದ್ದರೆ, ಅಂಥ ಆಸ್ತಿಯ ವ್ಯವಸ್ಥೆಗೋಸ್ಕರ ಆತ ಮಾಡಿಟ್ಟಿರುವ ಮೃತ್ಯುಪತ್ರವು ಶಾಸನ ಬದ್ಧವಾಗಿದೆಯೋ ಇಲ್ಲವೋ ಎಂಬ ಪ್ರಶ್ನೆಯನ್ನು ಭಾರತೀಯ ಮೃತ್ಯುಪತ್ರ ವಿಷಯಕ ಕಾನೂನಿನನ್ವಯವೇ ನಿರ್ಧರಿಸತಕ್ಕದ್ದು, (ಬಾಬೂರಾವ ವಿ. ಲಕ್ಷ್ಮೀಬಾಯಿ ILR 20 Bom 607, 610).

ಮೇಲ್ಕಾಣಿಸಿದ ಅಂತರರಾಷ್ಟ್ರೀಯ ಕಾನೂನಿನ ತತ್ವಗಳನ್ನು ಭಾರತೀಯ ವಾರಸಾ ಕಾಯ್ದೆ (Indian Succession Act) ಯ ೫ ನೆಯ ಕಲಮಿನಲ್ಲಿ ವಿಧಿಸಲಾಗಿದ್ದು, ಅಂಥವೇ ಏರ್ಪಾಡುಗಳನ್ನು ಮೊದಲು ಪ್ರಸ್ತುತ ಶಾಸನದ ಮಸೂದೆಯಲ್ಲಿ ಸೇರಿಸಲಾಗಿತ್ತು. ಆದರೆ ಸಂಸತ್ತಿನ ಜಾಯಿಂಟ ಕಮೀಟಿಯವರು ಅಂಥ ಏರ್ಪಾಡುಗಳು ಅನಗತ್ಯವೆಂದು ಅಭಿಪ್ರಾಯಪಟ್ಟದರಿಂದ ಅವನ್ನು ಕಾಯದೆಯಲ್ಲಿ ಅಡಕಗೊಳಿಸಲಿಲ್ಲ.

## ೯ ರಹವಾಸ (Domicile)

ಯಾವನೊಬ್ಬ ವ್ಯಕ್ತಿಯು ಪ್ರತ್ಯಕ್ಷವಾಗಿಯೋ. ಶಾಸನದ ದೃಷ್ಟಿ ಯಲ್ಲೋ ತನ್ನ ಕಾಯಂ ವಾಸಸ್ಥಳವಾಗಿ ಮಾಡಿಕೊಂಡ ದೇಶವು ಆತನ ರಹವಾಸದೇಶ [ Country of Domicile ] ವೆನಿಸುತ್ತದೆ. ಒಂದೇ ವೇಳೆಯಲ್ಲಿ ಒಬ್ಬವ್ಯಕ್ತಿಗೆ ಒಂದಕ್ಕಿಂತ ಹೆಚ್ಚು ರಹವಾಸಗಳಿರುವುದು ಸಾಧ್ಯವಿಲ್ಲ. ಈ ಕಾಯ್ದೆಯ ಮಟ್ಟಿಗೆ ವ್ಯಕ್ತಿಯ ಮರಣ ಸಮಯದ ರಹವಾಸ ಮಾತ್ರ ಮಹತ್ವದ್ದಾಗಿ ತತ್ಪೂರ್ವದ ರಹವಾಸಕ್ಕೆ ವಾರಸಾ ದೃಷ್ಟಿಯಿಂದ ಮಹತ್ವವಿಲ್ಲ.

## ೧೦ ಜಾರೀ ತಾರೀಖು

ಈ ಕಾಯ್ದೆ ಎಂದಿನ ದಿನ ಜಾರಿಗೆ ಬರಬೇಕೆಂಬ ಬಗ್ಗೆ ಕಾಯ್ದೆಯಲ್ಲಿಯೇ ಯಾವ ಏರ್ಪಾಡುಗಳೂ ಇಲ್ಲ. ಕಾರಣ ಜನರಲ್ ಕ್ಲಾಜಿಸ್ ಆ್ಯಕ್ಟ ಕಲಮು ೫ [ಬ] ಪ್ರಕಾರ ಈ ಕಾಯ್ದೆಗೆ ರಾಷ್ಟ್ರಾಧ್ಯಕ್ಷರ ಸಮ್ಮತಿ [Assent] ಸಿಕ್ಕ ದಿನದಿಂದಲೇ ಈ ಕಾಯ್ದೆ ಜಾರಿಗೆ ಬರುತ್ತದೆ. ರಾಷ್ಟ್ರಾಧ್ಯಕ್ಷರ ಸಮ್ಮತಿ ೧೯೫೬ ನೆಯ ಜೂನ್ ೧೭ ನೇ ತಾರೀಖಿನ ದಿನ ಈ ಕಾಯ್ದೆಗೆ ಸಿಕ್ಕಿರುವುದರಿಂದ, ಅಂದಿನಿಂದಲೇ ಅದು ಜಾರಿಗೆ ಬಂದಂತಾಗಿದೆ.

## ೧೧ ಚಾಲೂ ಪ್ರಕರಣಗಳು

ಈ ಕಾಯ್ದೆಯ ಏರ್ಪಾಡುಗಳು, ಈ ಕಾಯ್ದೆ ಜಾರಿಗೆ ಬಂದ ನಂತರ ಮೃತರಾದ ಹಿಂದೂ ಸ್ತ್ರೀ ಅಥವಾ ಪುರುಷರ ಆಸ್ತಿಗೆ ಮಾತ್ರ ಅನ್ವಯಿಸುತ್ತದೆ. ಕಾರಣ, ಈ ಕಾಯ್ದೆ ಜಾರಿಗೆ ಬಂದಾಗ ಚಾಲೂ ಇರುವ ದಾವೆಗಳಲ್ಲಿ ವಾರಸಾ ಹಕ್ಕಿಗೆ ಸಂಬಂಧಿಸಿದ ಮುದ್ದೆ issue)ಗಳಿದ್ದರೆ, ಅಂಥ ಮುದ್ದೆಗಳು ಹಿಂದಿನ ಹಿಂದೂ ಕಾನೂನಿಗನುಸರಿಸಿಯೇ ನಿರ್ಧಾರವಾಗುತ್ತವಲ್ಲದೆ, ಈ ಕಾಯ್ದೆಗನುಸರಿಸಿಯಲ್ಲ.

ದಾವೆಯೊಂದು ಚಾಲೂ ಇರುವಾಗ ಕಾಯ್ದೆಯಲ್ಲಿ ಬದಲಾವಣೆಯಾದರೆ, ಕಾಯ್ದೆಯಲ್ಲಿಯೇ ಹಾಗೆ ವಿಧಿಸಿದವಿನಾ, ವಾದಿ ಪ್ರತಿವಾದಿಯರ ಹಕ್ಕುಗಳು

ಹೊಸ ಕಾಯ್ದೆಯಿಂದ ಬಾಧಿತವಾಗಲಾರವು; ದಾವೆಯು ಅದನ್ನು ದಾಖಲ ಮಾಡಿದ ತಾರೀಖಿಗೆ ಜಾರಿಯಲ್ಲಿದ್ದ ಕಾನೂನಿನನ್ವಯವೇ ನಿಕಾಲೆಯಾಗುತ್ತದೆ, [ ದೇವೇಂದ್ರ ನರೇನ್‌ರಾಯ್ ವಿ. ಜೋಗೇಂದ್ರನರೇನ್ AIR 1956 ಕಲ್ಕತ್ತಾ ೫೫೩ ]. ಆದರೆ ಹೊಸ ಕಾಯ್ದೆಯ ಮುಖ್ಯ ಉದ್ದೇಶವೇ ಚಾಲೂ ಪ್ರಕರಣಗಳಿಗೆ ಹೊಸ ಏರ್ಪಾಡುಗಳನ್ನು ಅನ್ವಯಿಸುವುದಾಗಿದ್ದರೆ, ಅದೇ ಕಾಯಿದೆಯಲ್ಲಿ ವಿನಾಯತಿಯ ಏರ್ಪಾಡುಗಳಿದ್ದವಿನಾ, ಕಾಯ್ದೆಯು ಚಾಲೂ ಪ್ರಕರಣಗಳಿಗೆ ಅನ್ವಯಿಸುತ್ತದೆ, [ ಶಿವನಾಥ ವಿ. ಪೋರ್ಟರ್ AIR 1943 ಕಲ್ಕತ್ತಾ ३೭೭, ३೯೦ ].

ಹಿಂದುವೊಬ್ಬನ ಆಸ್ತಿಗೆ ಸಂಬಂಧಿಸಿದ ದಾವೆಯೊಂದು ಚಾಲೂ ಇರುವಾಗ, ಈ ಕಾಯ್ದೆ ಜಾರಿಗೆ ಬಂದನಂತರ ಆತ ಮೃತನಾದನೆಂದು ತಿಳಿಯೋಣ. ಅಂಥ ಪ್ರಸಂಗದಲ್ಲಿ ದಾವಾ ಮಿಳಖತಿಯ ವಾರಸಾ ಕ್ರಮವು ಈ ಕಾಯ್ದೆಗನುಸರಿಸಿಯೇ ನಿರ್ಧಾರವಾಗತಕ್ಕದ್ದು. ಉದಾಹರಣೆಗೆ ಆಸ್ತಿ ವಾಟಣಿಯ ದಾವೆಯೊಂದು ಚಾಲೂ ಇರುವಾಗ ವಾದಿ ಅಥವಾ ಪ್ರತಿವಾದಿಯು ಈ ಕಾಯ್ದೆ ಜಾರಿಗೆ ಬಂದನಂತರ ಮೃತನಾದರೆ, ಆತನ ವಾರಸದಾರನಾತೆಯಿಂದ ಯಾರನ್ನು ದಾವಾ ಪಕ್ಷಕಾರರನ್ನಾಗಿ ಮಾಡತಕ್ಕದ್ದೆಂಬುದು, ಈ ಕಾಯ್ದೆಯ ೮ ನೇಯ ಕಲಮಿನನ್ವಯವೇ ನಿರ್ಧಾರವಾಗತಕ್ಕದ್ದಲ್ಲದೆ, ಈ ಮೊದಲಿನ ಹಿಂದೂ ಕಾನೂನಿಗನುಸಾರವಾಗಿಯಲ್ಲ.

## ಕ. ೨

### [೧] ಈ ಕಾನೂನು ಅನ್ವಯಿಸತಕ್ಕದೆಂದರೆ—

ಅ ವೀರಶೈವ, ಲಿಂಗಾಯತ, ಬ್ರಹ್ಮ, ಪ್ರಾರ್ಥನಾ ಅಥವಾ ಆರ್ಯ ಸಮಾಜೀಯರನ್ನೊಳಗೊಂಡು ಹಿಂದೂ ಧರ್ಮದ ಯಾವದೇ ಪ್ರಕಾರ ಇಲ್ಲವೇ ವಿಕಾಸದನ್ವಯ ಧರ್ಮದಿಂದ ಹಿಂದುವೆನಿಸುವ ಯಾವದೇ ವ್ಯಕ್ತಿಗೆ,

ಬ ಬೌದ್ಧ, ಜೈನ ಅಥವಾ ಸೀಖ ಧರ್ಮೀಯನಾದ ಪ್ರತಿ ವ್ಯಕ್ತಿಗೆ, ಮತ್ತು

ಕ ಹಿಂದೂ ಕಾನೂನು ಅಥವಾ ತದ್ಭಾಗವಾದ ಯಾವುದೇ-ರೂಢಿ ಇಲ್ಲವೆ ಪದ್ಧತಿಯು ಈ ಕಾಯ್ದೆಯಲ್ಲಿ ಏರ್ಪಾಡಾದ

ಯಾವದೇ ವಿಷಯಗಳಲ್ಲಿ, ಈ ಕಾಯ್ದೆ ಪಾಸಾಗದಿದ್ದ ಪಕ್ಷದಲ್ಲಿ ತನಗೆ ಅನ್ವಯಿಸುತ್ತಿದ್ದಿಲ್ಲವೆಂದು ಸಿದ್ಧ ಮಾಡಿದಲ್ಲದೆ ಮುಸಲ್ಮಾನ, ಕ್ರೈಸ್ತ, ಪಾರಸಿ ಅಥವಾ ಯಹೂದೀ ಧರ್ಮೀಯನಲ್ಲದ, ಮಿಕ್ಕ ಪ್ರತಿ ವ್ಯಕ್ತಿಗೆ.

## ವಿವರಣೆ:—

ಕೆಳಗಿನವರು ಆಯಾಯ ಸನ್ನಿವೇಶಗಳಲ್ಲಿ ಹಿಂದೂ, ಬೌದ್ಧ ಜೈನ ಅಥವಾ ಸೀಖ ಧರ್ಮೀಯರೆನಿಸುತ್ತಾರೆ:—

ಅ ತಾಯಿತಂದೆಗಳಿಬ್ಬರೂ ಹಿಂದೂ, ಬೌದ್ಧ, ಜೈನ ಅಥವಾ ಸೀಖ ಧರ್ಮೀಯರಾಗಿರುವ ಔರಸ ಅಥವಾ ಅನೌರಸ [Illegitimate] ಮಕ್ಕಳು.

ಬ ತಂದೆ, ತಾಯಿಗಳಲ್ಲಿ ಒಬ್ಬರು, ಹಿಂದೂ, ಜೈನ, ಬೌದ್ಧ ಅಥವಾ ಸೀಖರಾಗಿದ್ದು ಅಂಥ ತಾಯಿ ಅಥವಾ ತಂದೆಯ ಬಣ, ಜಾತಿ, ಗುಂಪು ಅಥವಾ ಕುಟುಂಬದ ಸದಸ್ಯರಾಗಿಯೇ ಪೋಷಣೆ ಹೊಂದಿದ ಔರಸ ಅಥವಾ ಅನೌರಸ ಮಕ್ಕಳು.

ಕ ಹಿಂದೂ, ಬೌದ್ಧ, ಜೈನ ಅಥವಾ ಸೀಖಧರ್ಮಕ್ಕೆ ಧರ್ಮಾಂತರಿತನಾದ ಅಥವಾ ಪುನಧರ್ಮಾಂತರಿತನಾದ ಯಾವುದೇ ವ್ಯಕ್ತಿ.

೨ ಉಪಕಲಮು [೧] ರಲ್ಲಿ ಏನೇ ಅಡಕವಾಗಿದ್ದರೂ, ಕೇಂದ್ರ ಸರಕಾರವು ಆಫೀಸಿಯಲ್ ಗೆಜೆಟನಲ್ಲಿ ನೋಟಿಫಿಕೇಶನ್ ಮೂಲಕ ಅನ್ಯಥಾ ನಿರ್ದೇಶ ವಿತ್ತಲ್ಲದೆ ಸಂವಿಧಾನದ ಆರ್ಟಿಕಲ್ ೩೬೬ ರ ೨೫ ನೇ ಕ್ಲಾಜಿನ ಅರ್ಥದಲ್ಲಿ ಯಾವದೇ ಪರಿಶಿಷ್ಟ ಜಾತಿಯ ಸದಸ್ಯರಾಗುವವರಿಗೆ, ಈ ಕಾಯ್ದೆಯಲ್ಲಡಕವಾದುದಾವುದೂ ಅನ್ವಯಿಸತಕ್ಕದ್ದಲ್ಲ.

[೩] ಈ ಕಾಯ್ದೆಯ ಯಾವುದೇ ಭಾಗದಲ್ಲಿನ "ಹಿಂದೂ" ಶಬ್ದ ವನ್ನು ಧರ್ಮದಿಂದ ಹಿಂದುವಾಗಿರದಿದ್ದರೂ ಈ ಕಲಮಿನ್ಲಿಡಕವಾದ ಏರ್ಪಾಡುಗಳ ಬಲದಿಂದ ಈ ಕಾಯ್ದೆಯು ಯಾವನಿಗೆ ಅನ್ವಯಿಸುವದೋ, ಅಂಥವನನ್ನು ಒಳಗೊಳ್ಳು ವಂತೆ ಅರ್ಥಯಿಸತಕ್ಕದ್ದು.

## ಟೀಕೆ

ಹಿಂದೂ ಕಾನೂನನ್ನು ಅನ್ವಯಿಸುವಲ್ಲಿ ಯಾರನ್ನು "ಹಿಂದು" ಗಳೆಂದು ಪಂಗಣಿಸಬೇಕೆಂಬ ಬಗ್ಗೆ ೨ ನೆಯ ಕ್ಲಾಜಿನಲ್ಲಿ ಏರ್ಪಾಡು ಮಾಡಲಾಗಿದ್ದು, ಅದೆಲ್ಲ ಈ ಮೊದಲಿನ ಕಾನೂನಿನ ಕ್ರೋಢೀಕರಣ ಮಾತ್ರವಾಗಿದೆ. ೨ ನೆಯ ಕ್ಲಾಜಿನ ವಿವರಣೆಯ ಮೂಲಕ ಬೌದ್ಧ, ಜೈನ, ಹಾಗೂ ಸೀಖರೂ "ಹಿಂದೂ" ಪದದಲ್ಲಿ ಸಮಾವಿಷ್ಟರಾಗುವರೆಂದು ಸ್ಪಷ್ಟ ಪಡಿಸಲಾಗಿದೆ. ೩ ನೆಯ ಉಪಕಲಮಿನ "ಹಿಂದೂ" ಶಬ್ದದ ವ್ಯಾಖ್ಯೆಯಿಂದಾಗಿ ಹಿಂದೂ ಕಾನೂನು ಅನ್ವಯಿಸುವ ಎಲ್ಲ ಧರ್ಮದವರನ್ನೂ ಪ್ರತಿಸಾರೆ ನಿರ್ದಿಷ್ಟ ಪಡಿಸುವ ಅಗತ್ಯವಿಲ್ಲದಂತಾಗಿದೆ.

## . ೨ "ಹಿಂದೂ"

'ಹಿಂದು' 'ಹಿಂದೂಧರ್ಮ' ಇಲ್ಲವೆ 'ಹಿಂದೂ ಕಾನೂನು' ಗಳೆಂಬ ಪದಗಳ ಪ್ರಾಚೀನ ಸಂಸ್ಕೃತ ಧರ್ಮಶಾಸ್ತ್ರಗಳಲ್ಲಿ ಎಲ್ಲಿಯೂ ಕಂಡುಬರುವದಿಲ್ಲ. "ಸಿಂಧೂ" ಶಬ್ದದ ಗ್ರೀಕ ರೂಪಾಂತರವಾಗಿ 'ಹಿಂದೂ' ಶಬ್ದ ಪ್ರಚಾರಕ್ಕೆ ಬಂತೆಂದು ಹೇಳ ಲಾಗುತ್ತದೆ. ಈ ಅರ್ಥದಲ್ಲಿ ಸಿಂಧೂ (Indus) ನದಿಯ ಪೂರ್ವಕ್ಕೆ ವಾಸಿಸುವ ವರೆಲ್ಲ 'ಹಿಂದೂ' ಗಳು. ಆದರೆ 'ಹಿಂದೂ ಕಾನೂನು' ಎಂಬ ಪದದಲ್ಲಿಯ ' ದೂ' ಶಬ್ದಕ್ಕೆ ಈ ವಿಧವಾದ ಕೇವಲ ಪ್ರಾದೇಶಿಕ ಅರ್ಥವಿರದೆ, ಅದಕ್ಕೂ ಹೆಚ್ಚಾಗಿ ಒಂದು ವಿಶಿಷ್ಟ ಧಾರ್ಮಿಕ ಸಾಮಾಜಿಕ ಸಂಪ್ರದಾಯದ ಅನುನಾಯಿಗ ಳೆಂದು ಅರ್ಥವಿರುವದು ಕಂಡು ಬರುತ್ತದೆ. ನ್ಯಾಯಮೂರ್ತಿ ಪಾರ್ಸನ್ಸ ದಾಗಿ ವಿ ಪಾಕೊಟ್ಟಸಾನ್ ಜಾವೂ ಪ್ರಕರಣ (19 Bom. 789) ದಲ್ಲಿ ವಿಧಿಸಿರುವಂತೆ "ಹಿಂದೂಸ್ತಾನದ ವಾಸಿಗಳೆಲ್ಲ ಹಿಂದುಗಳಲ್ಲ ಹಿಂದೂ ಧರ್ಮದ ಅನುಯಾಯಿಗಳಾದ ಭಾರತ ವಾಸಿಗಳು ಮಾತ್ರ ಹಿಂದುಗಳು. ಹಿಂದೆ ಹಿಂದು ಗಳಾಗಿದ್ದು ವಿಚಾರಣೆಯ ಸಮಯದಲ್ಲಿ ಕ್ರೈಸ್ತರೋ, ಮುಸಲ್ಮಾನರೋ ಆಗಿರುವ ಹಿಂದವಾಸಿಗಳು ಸಹ ಹಿಂದು ಗಳೆನಿಸಲಾರರು.

## ೩ ಹಿಂದುತ್ವವ್ಯಾಪ್ತಿ

'ಹಿಂದೂ ಧರ್ಮ' ವೆಂಬುದಕ್ಕೆ ಇಂತಿಷ್ಟೇ ಮೂಲತತ್ವಗಳೆಂದು ಕಟ್ಟು ನಿಟ್ಟಾಗಿ ಹೇಳುವುದು ಕಷ್ಟಸಾಧ್ಯ. ಸ್ಥೂಲವಾಗಿ ಕೆಲವು ತತ್ವಗಳನ್ನು ಬಿಡಿಯಾಗಿಯೋ, ಇಡಿಯಾಗಿಯೋ ಉಲ್ಲಂಘಿಸಿದ ಮಾತ್ರವೇ ಹಿಂದುತ್ವ ಕಳೆಯಿತೆಂದು ಹೇಳಲು ಸಾಧ್ಯವಿಲ್ಲ. ಫಲವಾಗಿ, ಹಿಂದುತ್ವದ ವಿಶಾಲ ಚೌಕಟ್ಟಿನಲ್ಲೇ ಪರಸ್ಪರ ಭಿನ್ನವೂ, ಅನೇಕ ಸಲ ವಿರುದ್ಧವೂ, ಆಗಿರುವ ಅನೇಕ ಮತ, ಸಂಪ್ರದಾಯ ಜಾತಿ ಹಾಗೂ ಪಂಥಗಳು ಬೆಳೆದು ನಿಂತಿವೆ. ಈ ಎಲ್ಲ ಮತ-ಪಂಥಗಳ ಅನುಯಾಯಿಗಳಲ್ಲಿ ಯಾರಿಗೆ ಹಿಂದೂ ಕಾನೂನು ಅನ್ವಯಿಸುವುದು ಅಥವಾ ಅನ್ವಯಿಸಲಾರದೆಂಬುದನ್ನು ಈ ವರೆಗೆ ನ್ಯಾಯಾಲಯ ನಿರ್ಣಯಗಳಿಂದ ಮಾತ್ರ ಕಂಡುಕೊಳ್ಳಬೇಕಾಗಿದ್ದಿತು. ಲಿಂಗಾಯತ ಮತಸ್ಥರಿಗೆ ಹಿಂದೂ ಕಾನೂನು ಅನ್ವಯಿಸುವುದೆಂದು ಹೇಳಲು ಸೋಮಶೇಖರ ರಾಯಲ್ ವಿ| ಸುಗಟೂರು ಮಹದೇವ ರಾಯಲ್ (೧೯೩೭ ಪ್ರಿ. ಕೌ. ೧೮) ಪ್ರಕರಣದ ತೀರ್ಮಾನದಿಂದ ನಿಶ್ಚಿತವಾಯಿತು. ಹಾಗೇಯೇ ಬ್ರಹ್ಮಸಮಾಜೀಯರು, ಪ್ರಾರ್ಥನಾಸಮಾಜೀಯರು, ಆರ್ಯಸಮಾಜೀಯರು, ಜಾತಿವೈಷ್ಣವರು, ಮಹಾನುಭಾವರು, ಆದಿ ದ್ರಾವಿಡರು, ಆಸ್ಸಾಮ ಸಂತಾಳರು, ಮಧ್ಯಭಾರತದ ಕೊರಕುಗಳು, ಮಲಬಾರದ ಧಿಯ್ಯಾಗಳು ಹಾಗೂ ನಾಯರರು, ಬಂಗಾಲದ ರಾಜ ಬನ್ಸಿಗಳು, ಜಾಟರು, ನಾಯಿಕರು, ನಂಬೂದ್ರಿಗಳು, ಹಾಗೂ ಬೈರಾಗಿಗಳು ಹಿಂದೂ ಕಾನೂನಿಗೆ ಅಂಕಿತರಾಗಿರುವರೆಂಬುದು ಆಯಾಯ ನ್ಯಾಯಾಲಯನಿರ್ಣಯಗಳಿಂದಲೇ ನಿಶ್ಚಿತವಾಗಿದೆ.

## ೧೪ ವೀರಶೈವರು ಮತ್ತು ಲಿಂಗಾಯತರು

ವೀರಶೈವ ಹಾಗೂ ಲಿಂಗಾಯತ ಪದಗಳು ಸಾಮಾನ್ಯವಾಗಿ ಪರ್ಯಾಯ ಪದಗಳಾಗಿವೆ. ವೀರಶೈವರು ಇಷ್ಟಲಿಂಗಧಾರಿಗಳಾದ್ದರಿಂದ ಅವರನ್ನು ಲಿಂಗಾಯತರೆಂದು ಕರೆಯಲಾಗುತ್ತದೆ. ಹೀಗಿರುವಾಗ ಪ್ರಸ್ತುತ ಕಾಯ್ದೆಯಲ್ಲಿ ವೀರಶೈವರು ಮತ್ತು ಲಿಂಗಾಯತರನ್ನು ಪ್ರತ್ಯೇಕವಾಗಿ ನಿರ್ದಿಷ್ಟ ಪಡಿಸಿದ ಕಾರಣವೇನೆಂದು ಸ್ಪಷ್ಟವಾಗುವದಿಲ್ಲ.

### ಲಿಂಗಾಯತರು

ಮುಂಬಯಿ ಹೈಕೋರ್ಟಿನ ತಿರಕನಗೌಡ ವಿ| ಶಿವಪ್ಪ (45 Bom LR 992, 995 ) ಎಂಬ ಪ್ರಕರಣದಲ್ಲಿ ವಿಧಿಸಿರುವಂತೆ ಲಿಂಗಾಯತ ಧರ್ಮಕ್ಕೆ ತನ್ನದೇ ಆದ ತತ್ವಶಾಸ್ತ್ರ ( Philosophy ) ಹಾಗೂ ಶೀಲಾಚಾರಗಳಿವೆ; ಲಿಂಗಾಯತ

ಧರ್ಮದ ತಾತ್ವಿಕ ತಳಹದಿ ಷಟ್‍ಸ್ಥಲ ಸಿದ್ಧಾಂತವಾಗಿದ್ದು, ಅಷ್ಟಾವರಣ ಹಾಗೂ ಪಂಚಾಚಾರಗಳು ಲಿಂಗಾಯತ ಶೀಲಾಚಾರಕ್ಕೆ ತಳಹದಿಯಾಗಿವೆ.

.ಲಿಂಗಾಯತರು ಲಿಂಗ ಹಾಗೂ ನಂದಿ ಭಕ್ತರಾಗಿದ್ದು ಅವರಿಗೆ ಭವಾಂತರ ಗಳಲ್ಲಿ ನಂಬುಗೆಯಿಲ್ಲ. ಬಾಲ್ಯವಿವಾಹವು ಬಹುತರ ಅಸಮ್ಮತವೆನಿಸಿದ್ದು ವಿಧವಾ ವಿವಾಹಕ್ಕೆ ಸಮ್ಮತಿಯಿದೆ. ಲಿಂಗಾಯತರ ವಸತಿ ಬಹುಮಟ್ಟಿಗೆ ಕರ್ನಾಟಕ ದೇಶ ದಲ್ಲೇ ಕಂಡುಬರುತ್ತಿದ್ದು, ಅವರ ಧಾರ್ಮಿಕ ಸಾಹಿತ್ಯವೆಲ್ಲ ಬಹುತರ ಕನ್ನಡ ಭಾಷೆಯಲ್ಲೇ ಉಪಲಬ್ಧವಿದೆ. ಕನ್ನಡ ಭಾಷೆಯ ಪ್ರಸ್ತುತ ಶಕ್ತಿ ಸೌಂದರ್ಯಗಳು ಬಹು ಮಟ್ಟಿಗೆ ಲಿಂಗಾಯತ ವಚನಕಾರರು ಹಾಗೂ ಶರಣಕವಿಗಳ ಕೃಷಿಯಾಗಿವೆ.

ಅಷ್ಟಾವರಣ ದೀಕ್ಷೆ ಪಡೆದ ಬಹು ಸಂಖ್ಯಾತ ಲಿಂಗಾಯತರು ಪಂಚಮಸಾಲಿ ಗಳೆಂದು ಕರೆಯಲ್ಪಡುತ್ತಿದ್ದು, ಅವರು ಲಿಂಗಾಯತ ದೀಕ್ಷೆ ಪಡೆದ ಪೂರ್ವಾಶ್ರಮದ ಆರಾಧ್ಯ ಬ್ರಾಹ್ಮಣರೆಂದು ಇಂಪೀರಿಯಲ್ ಗ್ಯಾಝೆಟಿಯರ್ ಆಫ್ ಇಂಡಿಯ ಸಂಪುಟ ೧ ಪುಟ ೪೨೨ ರಿಂದ ತಿಳಿದು ಬರುತ್ತದೆ.

## ಶೂದ್ರ ಹಿಂದುಗಳು

ಮುಂಬಯಿ ಹೈಕೋರ್ಟಿನ ಗೋಪಾಲ ವಿ| ಹಣಮಂತ (3 Bom 273) ಎಂಬ ಪ್ರಕರಣದಲ್ಲಿ ಮೊಟ್ಟ ಮೊದಲನೆಯ ಸಲ ಲಿಂಗಾಯತರನ್ನು ಶೂದ್ರವರ್ಣದ ಹಿಂದುಗಳೆಂದು ಪರಿಗಣಿಸಿ ಹಿಂದೂ ಕಾನೂನನು ಅನ್ವಯಿಸತಕ್ಕದ್ದೆಂದು ತೀರ್ಮಾನ ವಾಯಿತು.

## ಆಚಾರ ವಿಚಾರಗಳು

ಬಸವ್ವ ವಿ' ಲಿಂಗನಗೌಡ (19 Bom 457) ಎಂಬ ಪ್ರಕರಣದಲ್ಲಿ ನ್ಯಾಯ ಮೂರ್ತಿ ರಾನಡೆಯವರು ಲಿಂಗಾಯತರನ್ನು ಕುರಿತು ಹೀಗೆ ಅಪ್ಪಣೆಯಿತ್ತರು: "ಲಿಂಗಾಯತರು........ ಬ್ರಾಹ್ಮಣ ಧಾರ್ಮಿಕ ವಿಧಿಗೆ ವಿಧೇಯರಲ್ಲ.... ವಿಧವಾ ವಿವಾಹ ಹಾಗೂ ಪುನರ್ವಿವಾಹದ ಸ್ವಾತಂತ್ರ್ಯ ಲಿಂಗಾಯತ ಸಮಾಜದಲ್ಲಿ ಉಪಲಬ್ಧವಿದೆ."

ಫಕೀರ ಗೌಡ ವಿ|| ಗಂಗಿ ( 22 Bom 277 ) ಪ್ರಕರಣದಲ್ಲಿ ವಿಧಿಸಿರು ವಂತೆ ಲಿಂಗ ಧಾರಿಗಳೆಲ್ಲ ಸರಿ ಸಮಾನರೆಂಬ ನಂಬುಗೆಯಿದ್ದು ಲಿಂಗಾಯತರಲ್ಲಿ ಸ್ತ್ರೀಯು ಪುರುಷನಷ್ಟೇ ಶ್ರೇಷ್ಠಳಾಗಿದ್ದಾಳೆ. ಕಾರಣ ಅವಳೂ ವಯಸ್ಕಳಾಗಿ ತನ್ನ ಇಚ್ಛೆಯ ವರನನ್ನು ಆರಿಸುವಂತಾಗುವತನಕ ಲಗ್ನವಾಗಕೂಡದು. ಲಿಂಗ

ಧಾರಿಗಳೆಲ್ಲ ಸರಿ ಸಮಾನರಾದುದರಿಂದ ಅವರಲ್ಲಿ ಜಾತಿ ಭೇದಕ್ಕೆ ಅವಕಾಶವಿಲ್ಲ. ಎಂತಲೇ ಲಿಂಗಾಯತ ಒಳ ಪಂಗಡಗಳಲ್ಲಿ ಅಂತರ್ವಿವಾಹವಾದರೆ ಅದು ನಿಷಿದ್ಧವಲ್ಲ. ನಿಷಿದ್ಧವೆಂದು ಸಾಧಿಸುವದಾದರೆ ರೂಢಿ ಅಥವಾ ಪದ್ಧತಿಯ ಬಲದಿಂದ ಮಾತ್ರ ಸಾಧಿಸಬಹುದು.

## ೧೫ ಬ್ರಹ್ಮ ಸಮಾಜ

ರಾಜಾ ರಾಮ ಮೋಹನ ರಾಯರಿಂದ ಸ್ಥಾಪಿತವಾದ ಬ್ರಹ್ಮ ಸಮಾಜದಲ್ಲಿ ಆದಿ, ನವ ವಿಧಾನ ಮತ್ತು ಸಾಧಾರಣ ಬ್ರಹ್ಮ ಸಮಾಜಗಳೆಂದು ಮೂರು ಪಂಗಡಗಳಿವೆ. ರಾಮ ಮೋಹನರಾಯರ ನೇರ ಅನುಯಾಯಿಗಳೆಂದು ಹೇಳಿಕೊಳ್ಳುವ ಆದಿ ಬ್ರಹ್ಮ ಸಮಾಜೀಯರು ಹಿಂದುಗಳಿಂದ ಅತ್ಯಲ್ಪ ಭಿನ್ನರಾಗಿದ್ದಾರೆ. ಅತ್ಯುದಾರವೂ ವಿಶಾಲವೂ ಆದ ಹಿಂದೂ ಧರ್ಮ ವ್ಯವಸ್ಥೆಯಲ್ಲಿ ಬ್ರಹ್ಮ ಸಮಾಜೀಯರಂತಹ ಸಾಂಪ್ರದಾಯ ವಿರೊಧಿಗಳಿಗೂ ಸ್ಥಾನ ವುಂಟೆಂದೂ, ವ್ಯಕ್ತಿಯೊಬ್ಬ ಹಿಂದೂ ಸಮಾಜದ ರೀತಿ ನೀತಿಗಳನ್ನು ಪರಿತ್ಯಜಿಸಿ ತಾನು ಹಿಂದುವಲ್ಲವೆಂದು, ಶ್ರುತ ಪಡಿಸಿದಲ್ಲದೆ, ಕೇವಲ ಬ್ರಹ್ಮ ಸಮಾಜೀಯನೆಂದು ತನ್ನನ್ನು ಕರೆದುಕೊಂಡ ಮಾತ್ರ ದಿಂದಲೇ ಆತನನ್ನು ಹಿಂದೂ ವಲ್ಲವೆಂದು ಹೇಳಲುಬಾರದೆಂದು, ಭಗವಾನ್ ಕೌರ ವಿ. ಜೆ. ಸಿ. ಬೋಸ (31 Cal 19) ಪ್ರಕರಣದಲ್ಲಿ ಪ್ರಿವ್ಹೀಕೌನ್ಸಿಲ್ ನ್ಯಾಯ ಮೂರ್ತಿಗಳು ತೀರ್ಮಾನ ವಿತ್ತಿದ್ದಾರೆ.

## ೧೬ ಪ್ರಾರ್ಥನಾ ಸಮಾಜ

ಡಾ|| ಆರ್. ಜಿ. ಭಾಂಡಾರಕರರಿಂದ ಸಂಸ್ಥಾಪಿತವಾದ ಪ್ರಾಥನಾ ಸಮಾಜದ ಅನುಯಾಯಿಗಳು ಸಾಂಪ್ರದಾಯಿಕ ಹಿಂದು ಸಮಾಜದ ಮೂರ್ತಿ ಪೂಜೆ ಹಾಗೂ ಜಾತಿ ನಿಷ್ಠತೆಗಳಿಗೆ ವಿರೋಧಿಗಳಾಗಿದ್ದಾರೆ. ಏಕೇಶ್ವರ ವಾದಿಗಳೆಂದು ಕೊಳ್ಳುವ ಈ ಸಮಾಜೀಯರು ಮುಂಬಯಿ ಹಾಗೂ ಮದ್ರಾಸ ನಗರಗಳಲ್ಲಿದ್ದು ಅವರ ಹಿಂದುತ್ವದ ಬಗ್ಗೆ ಈ ವರೆಗೆ ವಾದ ವುಂಟಾಗಿಲ್ಲ.

## ೧೭ ಆರ್ಯಸಮಾಜ

ಈ ಸಮಾಜದ ಸಂಸ್ಥಾಪಕರು ಸ್ವಾಮಿ ದಯಾನಂದರು. ಜಾತಿವಾದ ಹಾಗೂ ಮೂರ್ತಿಪೂಜಾ ವಿರೋಧಗಳು ಈ ಸಮಾಜದ ಮುಖ್ಯ ತತ್ವಗಳು. ವೇದಗಳು ಪರಮ ಮಾನ್ಯವೆಂದು ಪರಿಗಣಿಸುವ ಆರ್ಯ ಸಮಾಜೀಯರು ಹಿಂದುಗಳೆಂದೆನ್ನಲು ಯಾವ ಅಭ್ಯಂತರವಿರಲಾರದು. ಸನಾತನ ಹಿಂದುತ್ವಕ್ಕೂ ಆರ್ಯ ಸಮಾಜದ ನಂಬುಗೆಗಳಿಗೂ ಮಹದಂತರವಿದ್ದರೂ, ಕ್ರೈಸ್ತ ಅಥವಾ ಮುಹ್ಮದೀಯ ಪಂಥಗಳಂತೆ ಆರ್ಯಸಮಾಜದ ಪಂಥವು ಹಿಂದೂ ಧರ್ಮದಿಂದ ಪೂರ್ತಿಯಾಗಿ ಭಿನ್ನವಾದ

ಮತವೆಂದು ಪರಿಗಣಿಸಲು ಸಾಧ್ಯವಿಲ್ಲವೆಂದು ಅಲಹಾಬಾದ ಹೈಕೋರ್ಟು ಗಂಗಾ ಸರಣಸಿಂಗ ವಿ: ಸಿರ್ತಾಜಿ ಕುವರ AIR 1935 All 924 ಪ್ರಕರಣದಲ್ಲಿ ತೀರ್ಮಾನವಿತ್ತಿದೆ.

## ೧೮ ಬೌದ್ಧ-ಜೈನ-ಸೀಖ ಮತೀಯರು

ಬೌದ್ಧ, ಜೈನ ಮತ್ತು ಸೀಖ ಮತಗಳು ವೇದ ಪ್ರಾಮಾಣ್ಯವನ್ನು ಅಲ್ಲಗಳೆಯುತ್ತಿದ್ದು, ಬ್ರಾಹ್ಮಣತ್ವಕ್ಕೆ ಅವಕಾಶ ಕೊಡುವುದಿಲ್ಲ. ಹೀಗಿದ್ದರೂ ಈ ಮೂರು ಮತೀಯರಿಗೆ ವ್ಯಕ್ತಿಗತವಾದ ಕಾನೂನುಗಳಿಲ್ಲವಾಗಿ, ಅವರಿಗೆಲ್ಲ ಹಿಂದೂ ಕಾನೂನೇ ಅನ್ವಯಿಸುತ್ತ ಬಂದಿದೆ. ತಮಗೆ ಹಿಂದೂ ಕಾನೂನು ಅನ್ವಯಿಸದೆಂದೆನ್ನಲು ಈ ಮತೀಯರು ಯಾವುದಾದರೂ ರೂಢಿಯ ಬೆಂಬಲ ಪಡೆಯಬೇಕಾಗುತ್ತದೆ. ಈತನಕ ಹಿಂದೂಗಳಿಗೆ ಅನ್ವಯಿಸಲಾದ ಯಾವುದೇ ಕಾನೂನಿನ ಏರ್ಪಾಡನು ಈ ಮೂರೂ ಮತಸ್ಥರಿಗೂ ಅನ್ವಯಿಸಲಾಗಿದೆ. ಈ ಕಾಯ್ದೆಯಲ್ಲಾದರೋ, "ಹಿಂದೂ" ಪದದ ವ್ಯಾಖ್ಯೆಯಲ್ಲೇ ಬೌದ್ಧ, ಜೈನ, ಹಾಗೂ ಸೀಖ ಮತೀಯರು ಸಮಾವಿಷ್ಟರಾಗತಕ್ಕದ್ದೆಂದು ವಿಧಿಸುವ ಮೂಲಕ, ಹಿಂದುಗಳಿಗನ್ವಯಿಸುವ ಪ್ರತಿಯೊಂದು ಏರ್ಪಾಡನ್ನೂ ಈ ಮೂರೂ ಮತೀಯರಿಗೆ ಅನ್ವಯಿಸಲಾಗಿದೆ.

### ಬೌದ್ಧರು

ಗೌತಮಬುದ್ಧನ ಅನುಯಾಯಿಗಳಾದ ಬೌದ್ಧರಿಗೆ ಹಿಂದುಸ್ತಾನದಲ್ಲಿ ಪ್ರತ್ಯೇಕ ವೈಯಕ್ತಿಕ ಕಾನೂನು ಜಾರಿಯಲ್ಲಿಲ್ಲ. ಕಾರಣ, ವಿಶಿಷ್ಟ ರೂಢಿ-ಪದ್ಧತಿಗಳಿಗಂಕಿತವಾಗಿ ಬೌದ್ಧಮತೀಯರಿಗೆ ಹಿಂದೂ ಕಾನೂನೇ ಅನ್ವಯಿಸುತ್ತದೆ. (AIR 1924 Pat 420)

### ಜೈನರು

ಜೈನಧರ್ಮವು ಹಿಂದೂಧರ್ಮದ ಒಂದು ಉಪಶಾಖೆ ಮಾತ್ರವಾಗಿರದೆ ಅದರಷ್ಟೇ ಸನಾತನವಾದ ಭಿನ್ನಧರ್ಮವೆಂದು ಆಧುನಿಕ ಸಂಶೋಧನೆಗಳಿಂದ ಕಂಡು ಬರುತ್ತದೆ. (Vide 35 Bom L R 990 P.C )

ಆದರೆ, ಈ ವರೆಗೆ ಜೈನರು ವೈಶ್ಯವರ್ಣದ ಹಿಂದೂಗಳೆಂದೇ ನ್ಯಾಯನಿರ್ಣಯಗಳ ಸಾರವಾಗಿದೆ (vide 23 Bom 257).

ಮತೀಯರು ತಮ್ಮದೇ ಆದ ಕಾನೂನು ಗ್ರಂಥಗಳನ್ನು ಪಡೆದಿದ್ದಾರೆ. ಭದ್ರಬಾಹು ಸಂಹಿತೆ, ವರ್ಧಮಾನನೀತಿ ಮತ್ತು ಅಸನ ನೀತಿಗಳು ಇವುಗಳಲ್ಲಿ

ಪ್ರಮುಖವಾದವುಗಳು. (Vide ಗೆಟ್ಟಪ್ಪಾ ವಿ. ಯೇರಮ್ಮಾ AIR 1927 Mad 228) ಆದರೆ, ಅನ್ಯಥಾ ವಿಧಿಸುವ ರೂಢಿ ಅಥವಾ ಪದ್ಧತಿಗಳಿದ್ದಲ್ಲದೆ, ಸಾಮಾನ್ಯವಾಗಿ ಜೈನರಿಗೆ ಹಿಂದೂ ಕಾನೂನೇ ಅನ್ವಯಿಸುವುದೆಂಬುದು ತೀರ್ಮಾನವಾದ ವಿಷಯವಾಗಿದೆ (Vide 41 Bom L R 760). ಮುಂಬಯಿ ಹೈಕೋರ್ಟಿನ ಇನ್ನೊಂದು ತೀರ್ಮಾನ ಅಂಬಾಬಾಯಿ ವಿ. ಗೋವಿಂದ AIR 23 Bom 257, 26 ದಲ್ಲಿ ಕಂಡು ಬರುವಂತೆ ಜೈನರಲ್ಲಿ ಮೋರವಾಲ, ಓಸ್ವಾಲ, ಅಗರವಾಲ ಮತ್ತು ಖಂಡೇವಾಲ–ಎಂದು ನಾಲ್ಕು ಒಳಪಂಗಡಗಳಿವೆ

## ಸೀಖರು

ಗುರುನಾನಕನ ಅನುಯಾಯಿಗಳಾದ ಸೀಖರು ಹಿಂದೂ ಧರ್ಮದ ಒಂದು ಪಂಥವೆಂದೇ ಪರಿಗಣಿತರಾಗಿದ್ದಾರೆ. ಇವರು ಅನೇಕ ಹಿಂದೂ ದೇವತೆಗಳನ್ನು ಪೂಜಿಸುವುದಲ್ಲದೆ, ಅನೇಕ ಹಿಂದೂ ವಿಧಿಗಳನ್ನೂ ಪಾಲಿಸುತ್ತಾರೆ. ಗುರುನಾನಕನು ಸ್ವತಃ ಹಿಂದುವಾಗಿದ್ದನು. ಪ್ರಸಿದ್ಧ ಸೀಖಗುರುವಾದ ಗೋವಿಂದಸಿಂಗರು ದುರ್ಗಾಭಕ್ತರಾಗಿದ್ದರು. ಸೀಖ ಹಾಗೂ ಹಿಂದುಗಳಲ್ಲಿ ಅಂತರ್ವಿವಾಹಗಳಾಗುತ್ತಿದ್ದು, ಒಂದೇ ಕುಟುಂಬದಲ್ಲಿ ಒಬ್ಬಸೋದರ ಸೀಖನಾಗಿದ್ದರೆ, ಇನ್ನೊಬ್ಬ ಹಿಂದುವಾಗಿಯೇ ಉಳಿದಿರುವುದು ಅಪರೂಪವಲ್ಲ (31 Cal 11, 16).

## ೧೯ ಉಪಕಲಮು (೧) (ಕ)

ಈ ಉಪಕಲಮಿನನ್ವಯ ಮುಸಲ್ಮಾನ, ಕ್ರೈಸ್ತ, ಪಾರಸಿ ಅಥವಾ ಯೆಹೂದೀ ಧರ್ಮದವರಿಗೆ ಈ ಕಾಯ್ದೆ ಅನ್ವಯಿಸುವದಿಲ್ಲ. ಈ ಧರ್ಮದವರಲ್ಲದ ಇತರರಿಗೆಲ್ಲ ಸಾಮಾನ್ಯವಾಗಿ ಈ ಕಾಯ್ದೆಯ ಏರ್ಪಾಡುಗಳನ್ವಯಿಸುತ್ತವೆ. ಆದರೆ, ಇವರೂ ಸಹ ಈ ಕಾಯಿದೆ ಪಾಸಾಗದಿದ್ದ ಪಕ್ಷದಲ್ಲಿ, ತಮಗೆ ಹಿಂದೂ ಕಾನೂನಾಗಲೀ, ತದ್ಭಾಗವಾದ ರೂಢಿ-ಪದ್ಧತಿಗಳಾಗಲೀ ಯಾವುದೇ ವಿಷಯದಲ್ಲಿ ಅನ್ವಯಿಸುತ್ತಿರಲಿಲ್ಲವೆಂದು ಪ್ರಸ್ಥಾಪಿಸಿ, ಅಂಥ ವಿಷಯಗಳಲ್ಲಿ ಈ ಕಾಯ್ದೆಯಿಂದ ಮುಕ್ತತೆಪಡೆಯಬಹುದು. ಪರಿಶಿಷ್ಟ ಬಣಕ್ಕೆ ಸೇರಿದ ಜನಗಳು ಹಿಂದೂಗಳೇ ಆಗಿದ್ದರೂ ಅವರಿಗೆ ಈ ಕಾಯ್ದೆ ಅನ್ವಯಿಸಕೂಡದೆಂದು ಉಪಕಲಮು [೨] ರಲ್ಲಿ ಹೇಳಲಾಗಿದೆ.

## ೨೦ ವಿವರಣೆಗಳು

ಉಪಕಲಮು ಒಂದರ ಕೆಳಗಿನ ವಿವರಣೆಯಲ್ಲಿ ಹಿಂದು, ಬೌದ್ಧ, ಜೈನ ಮತ್ತು ಸೀಖರೆಂದರೆ ಯಾರೆಂದು ವಿವರಿಸಲಾಗಿದೆ. ಕ್ಲಾಜ [ಅ] ಮತ್ತು ಕ್ಲಾಜ [ಬ]ಗಳಲ್ಲಿ ಮಕ್ಕಳ ಧರ್ಮ ಹೇಗೆ ನಿರ್ಧರಿಸಲಾಗುವವೆಂಬುದನ್ನು ವಿವರಿಸಲಾಗಿದೆ

ಕ್ಲಾ [ಕ] ದಲ್ಲಿ ಧರ್ಮಾಂತರಿತರು ಹಾಗೂ ಪುನರ್ಧರ್ಮಾಂತರಿತರನ್ನು ಕುರಿತಾದ ಧರ್ಮ ನಿರ್ಧಾರ ವಿವೇಚನೆಯಿದೆ.

ಕ್ಲಾಜ

ಈ ಕ್ಲಾಜಿನ ಪ್ರಕಾರ ಮಗುವಿನ ತಾಯಿ ಹಾಗೂ ತಂದೆಗಳಿಬ್ಬರೂ ಹಿಂದು, ಬೌದ್ಧ ಜೈನ, ಅಥವಾ ಸೀಖ ಮತೀಯರಿರುವಾಗ ಮಗುವಾದರೂ ಅದು ಔರಸವಿರಲಿ ಅನೌರಸವಿರಲಿ ಹಿಂದೂ ಬೌದ್ಧ ಜೈನ ಅಥವಾ ಸೀಖಮತೀಯವೆನಿಸುತ್ತದೆ.

ಈ ಕಾಯ್ದೆ ಪಾಸಾಗುವದಕ್ಕೆ ಮೊದಲಾದರೂ ತಾಯಿ ತಂದೆಗಳಿಬ್ಬರೂ ಹಿಂದುಗಳಿದ್ದಾಗ ಔರಸ ಅಥವಾ ಅನೌರಸ ಮಕ್ಕಳು ಹಿಂದುಗಳೆಂದೇ ತೀರ್ಮಾನವಾಗಿದೆ. [Vid Bom 1131] ತಂದೆ ತಾಯಿಗಳಿಬ್ಬರೂ ಒಂದೇ ಮತದವರಾಗಿದಿರದ್ದರೆ ಮಗುವಿನ ಮತವು ಕ್ಲಾಜ [ಬ] ದ ಪ್ರಕಾರ ನಿರ್ಧಾರವಾಗಬೇಕು.

ಕ್ಲಾಜ ಬ

ಈ ಕ್ಲಾಜಿನನ್ವಯ ತಂದೆ–ತಾಯಿಗಳಲ್ಲಿ ಒಬ್ಬರು ಮಾತ್ರ ಹಿಂದು, ಬೌದ್ಧ, ಜೈನ, ಅಥವಾ ಸೀಖ ರಾಗಿದ್ದಲ್ಲಿ ಅವರ ಔರಸ ಅಥವಾ ಅನೌರಸ ಮಗು ಅನಿವಾರ್ಯವಾಗಿಯೇ ಹಿಂದೂ, ಬೌದ್ಧ, ಅಥವಾ ಸೀಖಧರ್ಮೀಯನೆನಿಸಲಾರದು ಇಂಥ ಮಗು ಹಿಂದು, ಸೀಖ, ಬೌದ್ಧ ಅಥವಾ ಜೈನ ಮತಕ್ಕೆ ಸೇರಿದ ತಂದೆ ಇಲ್ಲವೆ ತಾಯಿಯ ಬಣ ಜಾತಿ ಗುಂಪು ಇಲ್ಲವೆ ಕುಟುಂಬದ ಸದಸ್ಯನೆಂದು ಪೋಷಣೆಯಾಗಿದ್ದರೆ ಮಾತ್ರ ಮಗು ಹಿಂದು, ಸೀಖ, ಜೈನ ಅಥವಾ ಬೌದ್ಧ ಧರ್ಮೀಯ ವೆನಿಸುವದು. ಹಿಂದೂ ಪದ್ಧತಿಯಂತೆ ಪೋಷಣೆಹೊಂದಿದ ಹಿಂದೂ ವೇಶ್ಯೆಯೊಬ್ಬಳ ಮಕ್ಕಳು ಹಿಂದುಗಳೆನಿಸುವರೆಂದು ಕೋಕೋಳಾಂಬಳ್ ವಿ. ಸುಂದರಮ್ಮಾಳ್ AIR 1935 Mad 902 903 ಪ್ರಕರಣದಲ್ಲಿ ಮದ್ರಾಸ ಹೈಕೋರ್ಟು ತೀರ್ಮಾನವಿತ್ತಿದೆ. ಮೈನಾಬಾಯಿ ವಿ. ಉತ್ತರಂ (8 Moors indiau Appals 400) ಪ್ರಕರಣವೂ ಇದೇ ತತ್ವವನ್ನು ವಿಧಿಸಿದೆ.

ತಾಯಿ ತಂದೆಗಳಲ್ಲೊಬ್ಬರು ಹಿಂದೂ, ಬೌದ್ಧ, ಜೈನ ಅಥವಾ ಸೀಖರಲ್ಲದಿದ್ದರೆ ಈ ಕ್ಲಾಜು ಅನ್ವಯಿಸಲಾರದು.

ಜನ್ಮತ: ಮಕ್ಕಳ ಧರ್ಮವೇನೆಂಬಬಗ್ಗೆ ಈ ಕಾಯ್ದೆಯಲ್ಲಿ ಔರಸ (Legiti; mate) ಅಥವಾ ಅನೌರಸ (illegiti mate) ಮಕ್ಕಳಲ್ಲಿ ಭೇದವೆಣಿಸಲಾಗಿಲ್ಲ. ಔರಸ ಮಗುವಿನದು ತಂದೆಯ ಧರ್ಮವೆಂದೂ ಅನೌರಸ ಮಗುವಿನದು ತಾಯಿ ಧರ್ಮವೆಂದು ಈ ಪೂರ್ವದಲ್ಲಿ ಗ್ರಹಿಸಲಾಗುತ್ತಿತ್ತು. ಈ ಕಾಯ್ದೆ ಅಂಥ ಗ್ರಹಿ

ಕೆಯೆನ್ನು ಸ್ವೀಕರಿಸುವದಿಲ್ಲ. ಇಲ್ಲಿ ಮಗು ಹೇಗೆ ಪೋಷಿತವಾಗಿವೆ ಎಂಬುದನ್ನು ಈ ವಿಷಯದಲ್ಲಿ ಒರೆಗಲ್ಲಾಗಿ ಪರಿಗಣಿಸಲಾಗುತ್ತಿದೆ.

ಕ್ಲಾಜ ಚ

ಈ ಕ್ಲಾಜಿನನ್ವಯ ಹಿಂದೂ, ಬೌದ್ಧ, ಜೈನ ಅಥವಾ ಸೀಖ ಮತಕ್ಕೆ ಧರ್ಮಾಂತರ ಇಲ್ಲವೆ ಪುನರ್ಧರ್ಮಾಂತರ ಹೊಂದಿದವರು ಹಿಂದೂ, ಸೀಖ, ಬೌದ ಅಥವಾ ಜೈನರೆನಿಸುತ್ತಾರೆ. ಕಾರಣ ಅವರಿಗೆ ಈ ಕಾಯ್ದೆ ಅನ್ವಯಿಸುತ್ತದೆ

ಪ್ರಾಚೀನ ಹಿಂದೂ ಧರ್ಮ ಶಾಸ್ತ್ರದಲ್ಲಿ ದೀಕ್ಷೆ ಅಥವಾ ಪುನರ್ದೀಕ್ಷೆಯ ಮೂಲಕ ಹಿಂಪುತ್ವ ಸಂಪಾದನೆಗೆ ಅವಕಾಶವಿಲ್ಲವೆಂದು ಒಮ್ಮೆ ವಾದಿಸಲಾಗುತ್ತಿತ್ತು. ನಂತರದ ಅನೇಕ ನ್ಯಾಯ ನಿರ್ಣಯಗಳು ದೀಕ್ಷೆಯಿಂದ ಹಿಂದುಗಳಾಗಲು ಸಾಧ್ಯವಿದೆಯೆಂದು ತೀರ್ಮಾನಿಸಿವೆ. ರತನಸಿ (1928 Mad 1279) ಫಣೀಂದ್ರ ವಿ. ರಾಜೇಶ್ವರ (12 IA 72) ಮುಥುಸ್ವಾಮಿ ವಿ. ಸುಬ್ರಮ್ಮಣ್ಯ (33 Mad 340) ಗೋಪಾಲ ಮಹಾರಾಜ ವಿ. ಸೀತಾದೇವಿ (36 C W N 392 P C) ಕುಸುಮ ವಿ. ಸತ್ಯ (30 Cal 999) ಇವು ಇಂಥ ನಿರ್ಣಯಗಳಲ್ಲಿ ಪ್ರಮುಖವೆನಿಸಿವೆ.

ಸೀಖಧರ್ಮಕ್ಕೆ ಧರ್ಮಾಂತರ ಹೊಂದಲು, ಪವಿತ್ರವಾದ 'ಪಟಾಶ' ಮಿಶ್ರಿತ ಉದಕವನ್ನು ಕುಡಿದರೆ ಸಾಕೆಂದು ಭಾವುರಸಿಂಗ ವಿ. ಕರ್ತಾರಸಿಂಗ A I R 1950 M. B I 2 ಪ್ರಕರಣದಲ್ಲಿ ವಿಧಿಸಲಾಗಿದೆ.

ಧರ್ಮಾಂತರ ಹೃತ್ಪೂರ್ವಕವಾಗಿದೆಯೋ ಇಲ್ಲವೋ ಎಂಬುದನ್ನು ಎಂಥ ನ್ಯಾಯಾಲಯವೂ ನಿರ್ಣಯಿಸಲಾರದು. [ಅಬ್ದುಲರಝಾಕ ವಿ. ಆಗಾ 21 Cal 666] ಧರ್ಮಾಂತರಿತನು ಧರ್ಮತ್ಯಾಗವನ್ನು ಪ್ರಕಟವಾಗಿ ಘೋಷಿಸಿ, ಅದಕ್ಕಂಟಿಕೊಂಡಿದ್ದರೆ ಧರ್ಮಾಂತರವಾಗಿದೆಯೆಂದು ಪರಿಗಣಿಸಬೇಕಾಗುತ್ತದೆ. ಧರ್ಮಾಂತರಕ್ಕೆ ಹೇತು ವೇನೆಂಬುದೂ ಮಹತ್ವದ ವಿಷಯವಲ್ಲ. ಪ್ರೇಮವೋ, ದುರಾಶೆಯೋ ಧರ್ಮಾಂತರಕ್ಕೆ ಕಾರಣವಿರಬಹುದು; ಆದರೆ ಧರ್ಮಾಂತರ ಪ್ರತ್ಯಕ್ಷವಾಗಿ ನಡೆದಿದೆಯೆಂದು ಸಿದ್ಧವಾದ ಮೇಲೆ ಮುಂದಿನ ವಿಚಾರಣೆ ಅನಗತ್ಯ [ ರೋಶನಬಿ ವಿ. ಖುದಾಬಕ್ಷ A I R 1938 Lah 482 ].

ಐರೋಪಿಯನೊಬ್ಬನು ಹಿಂದೂಧರ್ಮದ ತತ್ವಗಳಿಗೆ ತನ್ನ ನಿಷ್ಠೆಯನ್ನು ವ್ಯಕ್ತಪಡಿಸಿ, ಹಿಂದೂಧರ್ಮ ಪ್ರಶಂಸಕನಾದ ಮಾತ್ರವೇ ಅವನನ್ನು 'ಹಿಂದು' ವೆಂದು

ಹೇಳಲುಬಾರದು. ಆದರೆ ಆತನು ಹಿಂದುಸ್ತಾನದಲ್ಲಿಯೇ ವಾಸಮಾಡಿ, ತನ್ನ ಹಿಂದಿನ ಧರ್ಮವನ್ನು ಪ್ರಕಟವಾಗಿ ತ್ಯಜಿಸಿ, ಧರ್ಮಾಂತರ ದೀಕ್ಷೆಪಡೆದು,ಹಿಂದೂ ಹೆಸರನ್ನು ಇಟ್ಟುಕೊಂಡು ಹಿಂದುಗಳಾದವರೊಡನೆ ವಿವಾಹಸಂಬಂಧ ಮಾಡಿ ಕೊಂಡರೆ ಮತ್ತು ತನ್ನ ಹಿಂದಿನ ವಾತಾವರಣದಿಂದ ಪೂರ್ಣ ಪ್ರತ್ಯೇಕಿತನಾಗಿ ಹಿಂದೂ ಪದ್ಧತಿಯಿಂದಲೇ ಜೀವಿಸ ತೊಡಗಿದರೆ, ಆತನನ್ನು ಹಿಂದುವೆಂದು ಪರಿ ಗಣಿಸಲಾಗುವದು. [ ರತನಸಿ ಮುರಾರಜಿ ವಿ. ಆಡ್ಮಿನಿಸ್ಟ್ರೇಟರ ಜನರಲ್ ಆಫ್ ಮದ್ರಾಸ 928 Mad 1279] ರತನಸಿ ಮುರಾರಜಿ ಪ್ರಕರಣದಲ್ಲಿ ಮೂಲತಃ ಆಸ್ಟ್ರೇಲಿಯನಳಾದ ಸ್ತ್ರೀಯೊಬ್ಬಳು ಬ್ರಿಟಿಶ ರಹವಾಸಿ ( Domical ) ಯಾಗಿ ಹಿಂದೂ ದೀಕ್ಷೆ ಪಡೆದಳು. ಆಕೆ ಹಿಂದೂಧರ್ಮದಲ್ಲಿರುವಾಗಲೇ ಅಮೃತ್ಯುಲೇಖೀ ಯಳಾಗಿ ಮೃತಳಾದಳು. ಅವಳ ಆಸ್ತಿಯ ವಾರಸಾ ಹಿಂದೂ ಕಾನೂನಿಗನು ಸಾರವೇ ನಲ್ಲತಕ್ಕದ್ದೆಂದು ತೀರ್ಮಾನವಾಯಿತು.

## ೨೧ ಉಪಕಲಮು (೨)

ಈ ಉಪ ಕಲಮಿನನ್ವಯ ಯಾವನೇ ಪರಿಶಿಷ್ಟ ಬಣಕ್ಕೆ ಸೇರಿದ ವ್ಯಕ್ತಿಗಳನ್ನು ಈ ಕಾಯ್ದೆಯು ಅವಕಾಶದಿಂದ ಹೊರಗಿಡಲಾಗಿದೆ ಪರಿಶಿಷ್ಟ ಬಣ (Schedu l d Tribes) ಗಳೆಂದರೆ ಭಾರತೀಯ ಸಂವಿಧಾನದ ಆರ್ಟಿಕಲ್ ೩೪೨ ರನ್ವಯ ಸಂವಿಧಾನದ ಉದ್ದೇಶಗಳಿಗೊಸ್ಕರ ಪರಿಶಿಷ್ಟ ಬಣಗಳೆಂದು ಯಾದಿಯಾದ ಬಣ (Tirbes) ಅಥವಾ ಕಾಡು ಜನಾಂಗಗಳು. ಈ ಯಾದಿಯಲ್ಲಿ ಯಾವದೇ ಹೊಸ ಬಣವನ್ನು ಸಮಾವಿಷ್ಟಗೊಳಿಸುವ ಇಲ್ಲವೆ ಇದ್ದುದನ್ನು ತಗೆದು ಹಾಕುವ ಅಧಿಕಾರ ಸಂವಿಧಾನದನ್ವಯ ಸಂಸತ್ತಿಗೆ ಸೇರಿದುದಾಗಿದೆ

## ೨೨ ಉಪಕಲಮು (೩)

ಈ ಉಪಕಲಮು ' ಹಿಂದು ' ವೆಂದರೆ ಈ ಕಾಯ್ದೆಯ ನಿಯಂತ್ರಣಕ್ಕೊಳ ಪಟ್ಟ ಯಾವುದೇ ಧರ್ಮದ ವ್ಯಕ್ತಿಯೆಂದು ವಿವರಿಸುತ್ತದೆ. ಈ ವರೆಗೆ ಹಿಂದೂ ಕಾನೂನು ಅನ್ವಯಿಸುವವರನ್ನು ಹಿಂದೂ, ಬೌದ್ಧ, ಜೈನ ಸೀಖ ಇತ್ಯಾದಿಯಾಗಿ ಪ್ರತಿ ಸಂದರ್ಭದಲ್ಲೂ ನಿರ್ದೇಶಿಸಲಾಗುತ್ತಿತ್ತು. ಪ್ರಸ್ತುತ ಏರ್ಪಾಡಿನಿಂದ ಕಾಯದೆ ಪಾಠದ ಕ್ಲಿಷ್ಟತೆ ನಿವಾರಣೆಯಾಗುವದರಿಂದ ಇದು ಅತ್ಯಂತ ಸ್ವಾಗತಾರ್ಹವೆನ ಬಹುದು.

**ಕ, ೩**

ವ್ಯಾಖ್ಯೆ ಹಾಗೂ ಅರ್ಥ ವಿವರಣೆಗಳು

[೧] ಸಂದರ್ಭ ದೃಷ್ಟಿಯಿಂದ ಬೇರೆ ವಿಧವಾಗಿ ಅರ್ಥಯಿಸುವ ಅಗತ್ಯ ಬಿದ್ದಲ್ಲದೆ, ಈ ಕಾಯ್ದೆಯಲ್ಲಿ ಕೆಳಗಿನಂತೆ ಆಯಾಯ ಪದಗಳ ಅರ್ಥಗಳಿವೆಯೆಂದು ತಿಳಿಯತಕ್ಕದ್ದು:-

(ಅ) **"ಗಂಡುವಳಿ ಸಂಬಂಧಿಕ"** (Agnate) :—ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ರಕ್ತ ಅಥವಾ ದತ್ತಕ ಮುಖಾಂತರ ಗಂಡು ಸಂಬಂಧದ ಮೂಲಕವೇ ಸಂಬಂಧಿಕನಾಗಿದ್ದರೆ, ಆತನು ಎರಡನೆಯವನ ಗಂಡುವಳಿ ಸಂಬಂಧಿಕನೆನಿಸುತ್ತಾನೆ.

ಬ **"ಅಳಿಯಸಂತಾನ ಕಾನೂನು"** :—ಈ ಕಾಯ್ದೆ ಪಾಸಾಗದಿದ್ದ ಪಕ್ಷದಲ್ಲಿ, ಈ ಕಾಯ್ದೆ ಏರ್ಪಾಡು ಮಾಡಿದ ವಿಷಯಗಳಲ್ಲಿ ಮದ್ರಾಸ ಅಳಿಯ ಸಂತಾನ ಕಾಯ್ದೆ ೧೯೪೯ ಅಥವಾ ರೂಢಿಗತ ಅಳಿಯಸಂತಾನ ಕಾನೂನಿನಗಂಕಿತರಾಗಿರುತ್ತಿದ್ದವರಿಗೆ ಅನ್ವಯಿಸುವಂತಹ ಕಾನೂನು ಪದ್ಧತಿ.

ಕ **ಹೆಣ್ಣುವಳಿ ಸಂಬಂಧಿಕ** (Cognate) :—ಒಬ್ಬ ವ್ಯಕ್ತಿ ಇನ್ನೊಬ್ಬನಿಗೆ ರಕ್ತದಿಂದಲೋ ದತ್ತಕ ಮುಖಾಂತರವೋ-ಸಂಬಂಧಿಕನಾಗಿದ್ದು ಅವರ ಸಂಬಂಧ ಪೂರ್ತಿಯಾಗಿ ಗಂಡು ಸಂಬಂಧವಾಗಿರದಿದ್ದರೆ, ಅವರಿಬ್ಬರೂ ಹೆಣ್ಣುವಳಿ ಸಂಬಂಧಿಕರೆನಿಸುತ್ತಾರೆ.

ಡ **ರೂಢಿ** (Custom)**ಮತ್ತು ಪದ್ಧತಿ**(usage) **ಗಳೆಂದರೆ**:— ಯಾವುದೇ ಸ್ಥಳೀಯ ಪ್ರದೇಶ, ಬಣ (tribe) ಜಾತಿ (Community) ಗುಂಪು ಅಥವಾ ಕುಟುಂಬದ ಹಿಂದುಗಳಲ್ಲಿ ದೀರ್ಘಕಾಲದವರೆಗಿನ ನಿರಂತರ ಹಾಗೂ ಏಕರೂಪ

ವಾದ ಪಾಲನೆಯಿಂದ ಕಾನೂನಿನ ಬಲ ಪಡೆದಿರುವಂಥ ಯಾವುದೇ ನಿಯಮವೆಂದು ಅರ್ಥವಾಗುತ್ತದೆ:

ಆದರೆ, ಆ ನಿಯಮವು ನಿಶ್ಚಿತವೂ, ಅಸೂಕ್ತ (Unreasonable) ಅಥವಾ ಸಾರ್ವಜನಿಕ ನೀತಿಗೆ ವಿರುದ್ಧವಲ್ಲದುದೂ ಆಗಿರತಕ್ಕದ್ದು;

ಅಲ್ಲದೆ; ಕೇವಲ ಕುಟುಂಬಕ್ಕೆ ಅನ್ವಯಿಸುವ ನಿಯಮ ವಾಗಿದ್ದ ಪಕ್ಷದಲ್ಲಿ, ಅಂಥ ಕುಟುಂಬ ಅದರ ಪಾಲನೆಯನ್ನು ನಿಲ್ಲಿಸಿರತಕ್ಕದ್ದಲ್ಲ.

**ಈ– ಸಮಾನ ಮಾತಾಪಿತೃಕ, ಭಿನ್ನಮಾತೃಕ, ಹಾಗೂ ಭಿನ್ನಪಿತೃಕರು:—**

೧ ಇಬ್ಬರು ಒಬ್ಬನೇ ಪಿತೃ (Ancestor) ವಿನ ಒಬ್ಬಳೇ ಪತ್ನಿ ಯಿಂದ ಹುಟ್ಟಿದ್ದರೆ, ಅವರಿಬ್ಬರೂ ಒಬ್ಬರಿಗೊಬ್ಬರು ಸಮಾನ ಮಾತಾಪಿತೃಕ (Full-blood) ಸಂಬಂಧಿಕರೆನಿಸು ತ್ತಾರೆ; ಸಮಾನ ಪಿತೃವಿನಿಂದಲೇ ಭಿನ್ನ ಪತ್ನಿಯರಿಂದ ಹುಟ್ಟಿ ದ್ದರೆ ಒಬ್ಬರಿಗೊಬ್ಬರು ಸಮಾನಪಿತೃಕ (Half-blood) ಸಂಬಂಧಿಕರೆನಿಸುತ್ತಾರೆ.

೨ ಇಬ್ಬರು ಒಬ್ಬಳೇ ಮಾತೃ (Ancestress) ವಿನಿಂದ ಆದರೆ ಬೇರೆ ಪಿತೃಗಳಿಂದ ಹುಟ್ಟಿದ್ದರೆ ಒಬ್ಬರಿಗೊಬ್ಬರು ಭಿನ್ನ ಪಿತೃಕ (Uterine) ಸಂಬಂಧಿಕರೆನಿಸುತ್ತಾರೆ.

**ವಿವರಣೆ** ಈ ಕ್ಲಾಜಿನಲ್ಲಿಯ ಪಿತೃ (Ancestor) ಪದ ತಂದೆ ಯನ್ನೂ, ಮಾತೃ (Ancestress) ಪದ ತಾಯಿಯನ್ನೂ ಒಳಗೊಳ್ಳುತ್ತದೆ.

**ಫ 'ವಾರಸದಾರ'** ನೆಂದರೆ ಈ ಕಾಯ್ದೆಯ ಪ್ರಕಾರ ಅಮೃತ್ಯು

ಲೇಖೀಯ (Intestate) ನಾದವನ ಆಸ್ತಿಗೆ ವಾರಸಾಹಕ್ಕು ಪಡೆದ ಗಂಡಸು ಅಥವಾ ಹೆಂಗಸು.

ಗ **'ಅಮೃತ್ಯುಲೇಖೀಯ'**—ತನ್ನ ಯಾವುದೇ ಆಸ್ತಿಯ ಬಗ್ಗೆ ಫಲಕಾರಿಯಾಗಬಲ್ಲ ಮೃತ್ಯುಲೇಖವೊಂದರಮೂಲಕ ವ್ಯವಸ್ಥೆ ಮಾಡದೆ ಮೃತನಾದ ವ್ಯಕ್ತಿಯು, ಅಂಥ ಆಸ್ತಿಯಮಟ್ಟಿಗೆ ಅಮೃತ್ಯುಲೇಖೀಯ (Intestate) ವಾಗಿ ಮೃತನಾದನೆಂದು ತಿಳಿಯಲಾಗುತ್ತದೆ.

ಹ **'ಮರುಮಕ್ಕತ್ತಾಯಂ ಕಾನೂನು'**:— ಎಂದರೆ

[ಅ] ಈ ಕಾಯ್ದೆ ಪಾಸಾಗದಿದ್ದಲ್ಲಿ, ಈ ಕಾಯ್ದೆಯಲ್ಲಿ, ಏರ್ಪಾಡುಮಾಡಿದ ವಿಷಯಗಳಲ್ಲಿ ಮದ್ರಾಸ ಮರುಮಕ್ಕಥ್ಥಯಂ ಕಾಯ್ದೆ ೧೯೩೨,ತ್ರಾವಣಕೋರ ನಾಯರಕಾಯ್ದೆ, ತ್ರಾವಣಕೋರ ಯೇಝುವ ಕಾಯ್ದೆ, ತ್ರಾವಣಕೋರ ನಂಜಿನಾಡ ವೆಲ್ಲಾಳಕಾಯ್ದೆ, ತ್ರಾವಣಕೋರ ಕ್ಷತ್ರಿಯ ಕಾಯ್ದೆ, ತ್ರಾವಣಕೋರ ಕೃಷ್ಣಾನಕ ಮರುಮಕ್ಕಥಯಿ ಕಾಯ್ದೆ, ಕೋಚೀನ ಮರುಮಕ್ಕಥಯಂ ಕಾಯ್ದೆ, ಇಲ್ಲವೆ ಕೋಚೀನ ನಾಯರಕಾಯ್ದೆ ಗಳಿಗಂಕಿತರಾಗಿರುತ್ತಿದ್ದ ವ್ಯಕ್ತಿಗಳಿಗೆ; ಅಥವಾ

[ಬ] ತ್ರಾವಣಕೋರ–ಕೋಚೀನ ಹಾಗೂ ಮದ್ರಾಸ ಪ್ರಾಂತದಲ್ಲೇ ಬಹುತರವಾಗಿ ವಾಸವಾಗಿರುವ ಯಾವುದೇ ಜಾತಿಯವರಾಗಿದ್ದು, ಈ ಕಾಯ್ದೆ ಏರ್ಪಾಡು ಮಾಡಿರುವ ವಿಷಯಗಳಲ್ಲಿ ಹೆಣ್ಣುವಂಶಾವಳಿಯ ವಾರಸಾ ಕ್ರಮಕ್ಕೆ ಅಂಕಿತರಾಗಿರುತ್ತಿದ್ದವರಿಗೆ–ಅನ್ವಯಿಸುವ ಕಾನೂನು ಪದ್ಧತಿ ಎಂದರ್ಥ.

ಆದರೆ, ಇದರಲ್ಲಿ ಅಳಿಯ ಸಂತಾನ ಕಾನೂನು ಸಮಾ

ವಿಷ್ಟವಾಗಿರಲಾರರು.

ಇ **ನಂಬೂದ್ರಿಕಾನೂನು'** —ಎಂದರೆ ಈ ಕಾಯ್ದೆ ಪಾ ದಿವದ್ದಲ್ಲಿ, ಈ ಕಾಯ್ದೆ ಏರ್ಪಾಡು ಮಾಡಿರುವ ವಿಷಯಗಳಲ್ಲಿ, ಮದ್ರಾಸ ನಂಬೂದ್ರಿಕಾಯ್ದೆ ೧೯೩೨, ಕೋಚೀನ ನಂಬೂದ್ರಿ ಕಾಯ್ದೆ; ಅಥವಾ ತ್ರಾವಣಕೋರ ಮಲಯಾಳ ಬ್ರಾಹ್ಮಣ ಕಾಯ್ದೆಗಳಿಗಂಕಿತರಾಗಿರುತ್ತಿದ್ದ ವ್ಯಕ್ತಿಗಳಿಗೆ ಅನ್ವಯಿಸುವ ಕಾನೂನು ಪದ್ಧತಿ ಎಂದರ್ಥ.

ಜ **'ಸಂಬಂಧಿತ'** ಎಂದರೆ,ಔರಸ ನಂಟಿನಿಂದ (Legitimate) ಸಂಬಂಧಿತ–ಎಂದರ್ಥ. ಆದರೆ, ಅನೌರಸ ಮಕ್ಕಳು ತಮ್ಮ ತಾಯಿಗೆ ಮತ್ತು ತಮ್ಮ ತಮ್ಮಲ್ಲಿ **ಸಂಬಧಿತ**ರೆಂದು ಪರಿಗಣಿಸತಕ್ಕದ್ದು; ಮತ್ತು ಅವರ ಔರಸ ಪೀಳಿಗೆಯವರು (Descendants) ಅವರಿಗೂ ಹಾಗೂ ತಮ್ಮ ತಮ್ಮಲ್ಲಿಯೂ **ಸಂಬಂಧಿತ**ರೆಂದು ತಿಳಿಯತಕ್ಕದ್ದು; ಮತ್ತು ಸಂಬಂಧವನ್ನು ವ್ಯಕ್ತಪಡಿಸುವ ಇಲ್ಲವೆ ಸಂಬಂಧಿಕ ಸೂಚಕವಾದ ಯಾವುದೇ ಶಬ್ದವನ್ನು ಇದೇ ರೀತಿಯಾಗಿ ಅರ್ಥಯಿಸತಕ್ಕದ್ದು.

೨] ಈ ಕಾಯ್ದೆಯಲ್ಲಿ ಸಂದರ್ಭ ದೃಷ್ಟಿಯಿಂದ ಅನ್ಯಥಾ ಅಗತ್ಯವೆನಿಸದೆ–ಪುಲ್ಲಿಂಗ ಸೂಚಕವಾದ ಶಬ್ದಗಳಲ್ಲಿ ಸ್ತ್ರೀಯರೂ ಒಳಗೊಳ್ಳುವರೆಂದು ತಿಳಿಯತಕ್ಕದ್ದಲ್ಲ.

## ಟೀಕೆ

### ೨೩ ಸಂದರ್ಭಾರ್ಥ

'ಸಂದರ್ಭ ದೃಷ್ಟಿಯಿಂದ ಬೇರೆ ವಿಧವಾದ ಅಗತ್ಯವಿದ್ದಲ್ಲದೆ " ಎಂಬ ಪರಿಮಿತಿಗಂಕಿತವಾಗಿ ಈ ಕಲಮಿನಲ್ಲಿ ಅರ್ಥ ವಿವರಣೆಗನ್ನು ಮಾಡಲಾಗಿದೆ. ಸಂದರ್ಭ ದೃಷ್ಟಿಯಿಂದ ಅನ್ಯಥಾ ಅಗತ್ಯವೆನಿಸದವರೆಗೆ ಕಾಯ್ದೆಯಲ್ಲಿ ಬೇರೆ ಬೇರೆ ಕಡೆ ಕಂಡು ಬರುವ ಒಂದೇ ಶಬ್ದವನ್ನು ಒಂದೇ ವಿಧವಾಗಿ ಅರ್ಥಯಿಸ ತಕ್ಕದ್ದೆಂಬುದು

ಕಾನೂನು ಅರ್ಥೀಕರಣದ ಪ್ರಸ್ಥಾಪಿತ ತತ್ವ ವಾಗಿದೆ. ( ನಾಮದೇವ ವಿ ಕೇಶವ A I R 193೮ Nag 58 61) ವ್ಯಾಕರಣ ದೃಷ್ಟಿಯಿಂದಲೂ ಇದೇ ಸಾಮಾನ್ಯಾರ್ಥ ಹೊರಡುವಾಗಲಂತೂ ಈ ವಿಧವಾದ ಅರ್ಥೀಕರಣ ಸ್ವಾಭಾವಿಕ ವೆನಿಸುತ್ತದೆ. ಕಾಯ್ದೆಯಲ್ಲೇ ಶಬ್ದವನ್ನು ಅರ್ಥಯಿಸಿದ್ದರಂತೂ ಅದನ್ನು ಬಿಟ್ಟು ಬೇರೆ ರೀತಿಯಾಗಿ ಅರ್ಥಯಿಸುವದು ಸಾಧ್ಯವೇ ಇಲ್ಲ. ಕಾರಣ ಈ ಕಾಯ್ದೆಯಲ್ಲಿ ಕಂಡುಬರುವ ವ್ಯಾಖ್ಯಾಯಿತ ಶಬ್ದಗಳನ್ನು ಈ ಕಲಮಿನ ವಾಖ್ಯೆಗನುಸಾರ್ಥವಾಗಿಯೇ ಎಲ್ಲ ಕಡೆ ಅರ್ಥಯಿಸತಕ್ಕದ್ದು. ಈ ಅರ್ಥವಿವರಣೆಗೆ ವಿರುದ ವಾಗಿರುವ ಬಳಕೆಯ, ನಿಘಂಟಿನ ಇಲ್ಲವೆ ವೈಯಾಕರಣಿಕ ಅರ್ಥಯಿಕೆಗಳು ಅಪ್ರಸ್ತುತವೆನಿಸುವವು ಶಾಸನದಲ್ಲಿ ವಿಧಿತವಾದ ಅರ್ಥವನ್ನು ಬಿಟ್ಟು ಶಬ್ದಕ್ಕೆ ಸ್ವತಂತ್ರವಾದ ಅರ್ಥ ಹಚ್ಚುವದು ಸಾಮಾನ್ಯವಾಗಿ ಕೋರ್ಟಿನ ಕರ್ತವ್ಯವಲ್ಲ. ( ಬಿ. ನಾನಾರಾವ ವಿ/ಎಂ. ಯು. ಅರುಣಾಚಲಂ ಚೆಟ್ಟಿಯಾರ AIR 1940 Mad ೩85)·

ಆದರೆ ಅರ್ಥಯಿಸಲ್ಪಟ್ಟ ಶಬ್ದವು ಅನೇಕ ಕಲಮುಗಳಲ್ಲಿ ಹೆಚ್ಚು ವಿಶಾಲವಾದ ಅಥವಾ ಸಂಕುಚಿತವಾದ ಅರ್ಥದಲ್ಲಿ ಬಳಕೆಯಾಗಿದ್ದರೆ ಅದನ್ನು ಅರ್ಥವಿವರಣಾಕ್ಲಾಜಿನನ್ವಯವೇ ಅರ್ಥಯಿಸುವ ಅಗತ್ಯವೇನಿಲ್ಲ. ಹೀಗೆ ಸಂದರ್ಭಾನುಸಾರ ಅರ್ಥಭೇದ ಅಗತ್ಯವೆನಿಸುವದೆಂದೇ ಕಾಯ್ದೆಯಲ್ಲಿ 'ಸಂದರ್ಭಾನುಸಾರ ಅನ್ಯಥಾ ಅಗತ್ಯವಿಲ್ಲದೆ' ಎಂಬ ಪರಮಿತಿ ಏರ್ಪಟ್ಟಿದೆ. ಸಂದರ್ಭ ದೃಷ್ಟಿಯಿಂದ ಅಗತ್ಯವೆನಿಸುವಲ್ಲಿ ಶಬ್ದಗಳಿಗೆ ಸಂದರ್ಭಾನುಸಾರವಾಗಿ ಉಚಿತ ವೆನಿಸುವ 'ಅರ್ಥ' ವನ್ನು ಕೊಡತಕ್ಕದ್ದು:– ಕಾರ್ತಿಕ ಚಂದ ವಿ/ ರಾಣಿ ಹರ್ಷಮುಖಿ AIR 1943 Cal 385.

ವ್ಯಾಖ್ಯೆ ಮಾಡುವಾಗ ಕೆಲವು ಕಡೆ 'ಅರ್ಥ ವಾಗುತ್ತದೆ.' ಎಂದು ಹೇಳಿದ್ದರೆ ಬೇರೆ ಕಡೆ "ಒಳಗೊಳ್ಳುತ್ತದೆ" ಎಂದು ಈ ಕಲಮಿನಲ್ಲಿ ಪದ ಪ್ರಯೋಗ ಕಂಡು ಬರುತ್ತದೆ. "ಅರ್ಥ ವಾಗುತ್ತದೆ" ಎಂಬ ಪ್ರಯೋಗ ವಿರುವಲ್ಲಿ ವಾಖ್ಯೆ ಶಬ್ದದ ಸಂಪೂರ್ಣಾರ್ಥವನ್ನು ವಿಧಿಸುವದೆಂದು ಪರಿಗಣಿಸತಕ್ಕದ್ದು "ಒಳಗೊಳ್ಳುತ್ತದೆ" ಯೆಂಬ ಪ್ರಯೋಗ ವಿರುವಲ್ಲಿ 'ಶಬ್ದ'ಕ್ಕೆ ಅದರ ಸಾಮಾನ್ಯಾರ್ಥ ವಿರುವದಲ್ಲದೆ, ಕೆಲವಮಟ್ಟಿಗೆ ಹೆಚ್ಚಿನ ವಿಶಿಷ್ಟಾರ್ಥವೂ ಇರತಕ್ಕದ್ದೆಂದು ಭಾವವಿದೆ. ಉದಾಹರಣೆಗೆ 'ಪಿತೃ' ಶಬ್ದಕ್ಕೆ ಪೂರ್ವಜ ಎಂಬ ಸಾಮಾನ್ಯಾರ್ಥವಲ್ಲದೆ ತಂದೆ ಎಂದೂ ಅರ್ಥ ವಿರತಕ್ಕದ್ದೆಂದೂ, "ಮಾತೃ" ಶಬ್ದಕ್ಕೆ ಪೂರ್ವಜೆ ಯೆಂದು ಸಾಮಾನ್ಯಾರ್ಥ ವಲ್ಲದೆ ತಾಯಿ ಯೆಂದೂ ಅರ್ಥ ವಿರತಕ್ಕದ್ದೆಂದೂ; ಈ ಕಾಯ್ದೆಯಲ್ಲಿ ವಿಧಿಸಲಾಗಿದೆ.

## ೨೪ ಗಂಡುವಳಿಗರು (Agnates)

ಈ ಕಾಯ್ದೆಯ ವಿಧೇಯಕದಲ್ಲಿ ಗಂಡುವಳಿಗರನ್ನು (Agnates ಗೋತ್ರಜ ರೆಂದೂ ಕರೆಯಲಾಗಿತ್ತು. ಆದರೆ ಲೋಕಸಭೆಯು ಆ ಪದವನ್ನು ತಗೆದುಹಾಕಿತು. ಈ ಕಾಯ್ದೆಯ "ಗಂಡುವಳಿಗ" ಮತ್ತು ಹಿಂದೂ ಕಾನೂನಿನ 'ಗೋತ್ರಜ' ಪದಗಳು ಸಮಾನಾರ್ಥವುಳ್ಳವುಗಳಾಗಿಲ್ಲ. ಮಗಳ ಮಗನು ನಿಜವಾಗಿ ಗಂಡುವಳಿ ಸಂಬಂಧಿಕನಲ್ಲದಿದ್ದರೂ ಮಿತಾಕ್ಷರದಲ್ಲಿ ಆತನನ್ನು ಗೋತ್ರಜ ಸಪಿಂಡನೆಂದು ಪರಿಗಣಿಸಲಾಗಿದೆ.

ಈ ಕಾಯ್ದೆಯ ಗಂಡುವಳಿ (Angate)ಸಂಬಂಧಿಕರು (೧) ರಕ್ತ ಸಂಬಂಧಿಕರಾಗಿರತಕ್ಕವರು ಅಥವಾ (೨) ದತ್ತಕ ಮೂಲಕ ಸಂಬಂಧಿಕ ರಾಗಿರತಕ್ಕದ್ದು; (೩) ಇಂಥ ಸಂಬಂಧ ಪೂರ್ತಿಯಾಗಿ ಗಂಡಸಿನ ಮುಖಾಂತರ ವಿರತಕ್ಕದ್ದು. ಈ ದೃಷ್ಟಿಯಿಂದ ವಂಶಾಗ್ರವಳಿ (Ascending line) ಯಲ್ಲಿ ಯಾವನೊಬ್ಬನ ತಂದೆ, ಅಜ್ಜ, ಮುತ್ತಜ್ಜ ಮೊದಲಾದವರೂ, ವಂಶಾನುವಳಿ (Descending line) ಯಲ್ಲಿ ಆತನ ಮಗ ಮೊಮ್ಮಗ ಮರಿಮಗ ಮೊದಲಾದವರೂ ಮತ್ತು ಸಹವಂಶಾವಳಿ (Collateral line) ಯಲ್ಲಿ ಕಕ್ಕ ಕಕ್ಕನಮಗ ಮೊದಲಾದವರೂ ಆತನಿಗೆ ಗಂಡುವಳಿಯ ಸಂಬಂಧಿಕರೆನಿಸುತ್ತಾರೆ. ಸಹವಂಶಿಕ (Collateral) ನು ಅದೇ ವಂಶದವನಾದರೂ ಬೇರೆ ವಳಿ (line) ಯವನಾಗಿರುತ್ತಾನೆ.

ಗಂಡುವಳಿಯ ಸಂಬಂಧಿಕರು ಗಂಡಸರೇ ಇರಬೇಕಾದ ಅಗತ್ಯವಿಲ್ಲ. ಹೆಂಗಸರೂ ಅಂಥ ಸಂಬಂಧ ಪಡೆಯಲು ಸಾಧ್ಯವಿದೆ. ಉದಾಹರಣೆಗೆ ಯಾವನೊಬ್ಬನ ಮಗಳು ಹೆಂಡತಿ, ಸೋದರಿ, ಅಣ್ಣ ಅಥವಾ ತಮ್ಮನ ಮಗಳು, ಸೋದರ ಪತ್ನಿ, ಮಗನ ಹೆಂಡತಿ, ತಂದೆಯ ಅಕ್ಕ ಇಲ್ಲವೆ ತಂಗಿ, ಇವರೆಲ್ಲ ಗಂಡುವಳಿಯ ಮೂಲಕ ಸಂಬಂಧಿಕರಾಗುತ್ತಾರೆ. ಹೆಣ್ಣು ಸಂಬಂಧದಿಂದ ಸಂಬಂಧಿಕರಾದವರನ್ನು "ಹೆಣ್ಣುವಳಿಗ" (Cognate ರೆಂದು ಈ ಕಾಯ್ದೆಯಲ್ಲಿ ಕರೆಯಲಾಗಿದೆ. ಉದಾಹರಣೆಗೆ ಮಗಳ ಮಕ್ಕಳು, ಸೋದರಮಾವಂದಿರು, ಸೋದರತ್ತೆಮಕ್ಕಳು ಮೊದಲಾದವರು.

## ೨೫ ಅಳಿಯಸಂತಾನ ಕಾನೂನು

ಕ್ಲಾಜ (ಬ) ದಲ್ಲಿ ಅಳಿಯಸಂತಾನ ಕಾನೂನನ್ನು ವ್ಯಾಖ್ಯಾಯಿಸಿಲ್ಲ; ಅಳಿಯ ಸಂತಾನ ಕಾನೂನೆಂದರೆ, ಮದ್ರಾಸ ಅಳಿಯಸಂತಾನ ಕಾಯ್ದೆ ೧೯೪೯ ರ ಏರ್ಪಾಡುಗಳು ಇಲ್ಲವೆ ರೂಢಿಗತ ಅಳಿಯಸಂತಾನ ಕಾನೂನೆಂದು ಮಾತ್ರ ವಿವರಿಸಲಾಗಿದೆ. ಈ ಕಾನೂನು ಪದ್ಧತಿಯಲ್ಲಿ ಅನುವಂಶಿಕತೆ (Descent) ಯನ್ನು ಹೆಣ್ಣುವಳಿ

ಯಲ್ಲಿ ಗುರುತಿಸಲಾಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಬಂಟರು, ಬಿಲ್ಲವರು, ಹಾಗೂ ಪುರೋಹಿತ ವರ್ಗದವರಲ್ಲದ ಜೈನರಲ್ಲಿ ಈ ಕಾನೂನು ಜಾರಿಯಲ್ಲಿತ್ತು.

## ೨೬ ಹೆಣ್ಣುವಳಿಗರು (Cognats)

ಹೆಣ್ಣುವಳಿಗರು ಈ ಕಾಯ್ದೆಯನ್ವಯ (೧) ರಕ್ತ ಸಂಬಧಿಕರು ಇಲ್ಲವೆ (೨) ದತ್ತಕ ಸಂಬಂಧಿಕರಾಗಿದ್ದು, (೩) ಪೂರ್ತಿಯಾಗಿ ಗಂಡುವಳಿಯ ಸಂಬಾಧಿಕರಾಗಿಲ್ಲ. ಮೃತನಿಗೆ ಹೆಣ್ಣುಮಕ್ಕಳಮೂಲಕ ಸಂಬಂಧಿಕರಾದವರನ್ನು ಹೆಣ್ಣುವಳಿಗ(Cognates) ರೆಂದು ಕರೆಯಲಾಗುತ್ತದೆ. ಮಗಳ ಮಗ, ಮಗಳ ಮಗಳು, ಸೋದರಿಯ ಮಕ್ಕಳು ಸೋದರತ್ತೆಯ ಮಕ್ಕಳು, ಸೋದರಮಾವನ ಮಕ್ಕಳು ಇವರೆಲ್ಲ ಹೆಣ್ಣುವಳಿಗರಾಗಿದ್ದಾರೆ.

ಈ ಕಾಯ್ದೆಯ "ಹೆಣ್ಣುವಳಿಗ"ನು ಹಿಂದೂ ಕಾನೂನಿನ'ಬಂಧು'ವಿಗೆ ಸಮಾನ ನಲ್ಲವೆಂಬುದನ್ನು ಗಮನಿಸತಕ್ಕದ್ದು.

## ೨೭ ವಿವಾಹ ಸಂಬಂಧಿಕರು

ಮೃತನಿಗೆ ಲಗ್ನದ ಮೂಲಕ ಮಾತ್ರ ಸಂಬಂಧಿಕನಾದವನು ಗಂಡುವಳಿಗನೂ ಅಲ್ಲ ಹೆಣ್ಣುವಳಿಗನೂಅಲ್ಲ. ಕಾರಣ ಈ ಕಾಯ್ದೆಗನುಸಾರ ಆತನಿಗೆ ವಾರಸಾ ಹಕ್ಕು ಉದ್ಭೂತವಾಗುವದಿಲ್ಲ. ಆದರೆ, ಅಂಥವನು ಕಾಯ್ದೆಯ ೧ ನೆಯ ಇಲ್ಲವೆ ೨ ನೆಯ ಪರಿಶಿಷ್ಟದಲ್ಲಿ ಸಮಾವಿಷ್ಟನಾಗಿದ್ದರೆ ವಾರಸಾಹಕ್ಕು ಪಡೆಯುತ್ತಾನೆ.

## ೨೮ ರೂಢಿ ಮತ್ತು ಪದ್ಧತಿ

ಕ್ಲಾಜ (ಡ) ದಲ್ಲಿ ವಿಧಿಸಿರುವಂತೆ, ರೂಢಿ (Custom) ಇಲ್ಲವೆ ಪದ್ಧತಿ (usage) ಕಾನೂನಿನ ಬಲಪಡೆದಿದ್ದರೆ ಮಾತ್ರ ನ್ಯಾಯಾಲಯಗಳು ಅವನ್ನು ಮನ್ನಿಸಿ ಅನ್ವಯಿಸುತ್ತವೆ. ರೂಢಿಯೆಂದರೇನೆಂಬುದನ್ನು ಪ್ರಿವ್ಹೀ ಕೌನ್ಸಿಲ್ ನ್ಯಾಯಮೂರ್ತಿಗಳು ರಾಣಾ ಲಕ್ಷ್ಮೀ ವಿ||ಶಿವನಾಥ (14 M I A 570 585) ಕೇಸಿನಲ್ಲಿ ಈ ವಿಧವಾಗಿ ವಿವರಿಸಿದ್ದಾರೆ: "ರೂಢಿಯೆಂಬುದು ದೀರ್ಘಕಾಲೀನ ಬಳಕೆ(usage)ಯಿಂದಾಗಿ ಕಾನೂನಿನ ಬಲಪಡೆದಿರುವ ನಿಯಮ (rule) ವಾಗಿದೆ (48 cal 419 P. C.). ಮನ್ನಣೆ ಗರ್ಹವಾಗಲು ರೂಢಿಗೆ ಪ್ರಾಚೀನತೆ (Antiquity) ನಿಶ್ಚಿತತೆ (Certainty) ಸೂಕ್ತತೆ (Reasonableness) ಹಾಗೂ ನಿರಂತರತೆ (Continuity) ಗಳು ಆಗತ್ಯವಾಗಿವೆ. ಅಲ್ಲದೆ, ರೂಢಿಗೆ ಈಯೆಲ್ಲ ಲಕ್ಷಣಗಳುಂಟೆಂದು ಸ್ಪಷ್ಟವಾಗಿಯೂ ನಿಸ್ಸಂದಿಗ್ಧವಾಗಿಯೂ ಸಾಕ್ಷ್ಯಬಲದಿಂದ ಪ್ರಸ್ಥಾಪಿತವಾಗುವುದೂ ಅಷ್ಟೇ ಆವಶ್ಯಕ

ವಾಗಿದೆ. ಇಂಥ ಸಾಕ್ಷ್ಯ (Evidence) ದ ಮುಖಾಂತರವೇ ನ್ಯಾಯಾಸ್ಥಾನಕ್ಕೆ ರೂಢಿಯ ಅಸ್ತಿತ್ವದ ಬಗೆಗೂ, ಅದರ ಪ್ರಾಚೀನತೆ ಹಾಗೂ ನಿಶ್ಚಿತತೆಗಳ ಬಗೆಗೂ ಮನವರಿಕೆಯುಂಟಾಗಬಲ್ಲುದು. ಈ ಪ್ರಾಚೀನತೆ ಹಾಗೂ ನಿಶ್ಚಿತತೆಯ ನಿರ್ಬಂಧಗಳೇ ರೂಢಿಯನ್ನು ಕಾನೂನೆಂದು ಮನ್ನಿಸುವ ಕುರಿತಾದ ನಿಯಮಕ್ಕೆ ತಳಹದಿಯೆನಿಸಿವೆ. "

ಕಾನೂನಿನ ಬಲಪಡೆಯಲು ಅರ್ಹತೆ ಪಡೆಯಬೇಕಾದರೆ ರೂಢಿಯು ಪ್ರಾಚೀನವೂ (Ancient ಸನಾತನವೂ ( Immemorial ) ಆಗಿರತಕ್ಕದ್ದೆಂದು ಹೇಳಲಾಗಿದೆ. ಸನಾತನತೆಯ ಪ್ರಶ್ನೆ ಅನೇಕ ನ್ಯಾಯಾಲಯಗಳೆದುರು ಚರ್ಚೆಗೆ ಬಂದು ಹೋಗಿದ್ದು ೧೮೭೩ರನೇ ಇಸ್ವಿಯ ರೆಗ್ಯುಲೇಟಿಂಗ ಆ್ಯಕ್ಟ The Regulating Act 1873 ಜಾರಿಗೆ ಬಂದ ಸಮಯದಲ್ಲಿ ಉರ್ಜಿತದಲ್ಲಿದ್ದ ಯಾವದೇ ರೂಢಿಯನ್ನು (Custom) ಸನಾತನ ರೂಢಿಯೆಂದು ಪರಿಗ್ರಹಿಸತಕ್ಕದ್ದೆಂದು ಕೆಲವು ತೀರ್ಮಾನಗಳಿವೆ (149 I C 1093 .

ರೂಢಿಗೆ ಕೋರ್ಟಿನ ಮನ್ನಣೆ ದೊರೆಯಲು ಅದು ಸಾರ್ವಜನಿಕ ಧೋರಣೆಗೆ ಅವಿರುದ್ಧವಾಗಿರುವುದೂ ಅಗತ್ಯವಾಗಿದೆ. ನೀತಿಗಾಗಲೀ ಸಾರ್ವಜನಿಕ ಧೋರಣೆಗಾಗಲಿ, ಇಲ್ಲವೆ ಪ್ರಕಟಿತ ಕಾನೂನಿಗಾಗಲಿ, ವಿರುದ್ಧವಾಗಿರುವ ರೂಢಿಯು ಕಾನೂನುವಿರೋಧಿಯೆನಿಸುವದು, ( 18 IC 979, 37 IC 96 ಮತ್ತು 1949 H P 2ι ) .

ಸ್ಥಳೀಯ ಹಾಗೂ ಕುಟುಂಬ ರೂಢಿಗಳಿಗನ್ವಯಿಸುವ ಮೇಲಿನ ನಿರ್ಬಂಧಗಳು ಕುಟುಂಬ ಪದ್ಧತಿಗೂ (Family usage) ಅನ್ವಯಿಸುತ್ತವೆ. ಅಲ್ಲದೆ ಇವೆಲ್ಲ ಲಕ್ಷಣಗಳನ್ನು ಪಡೆದಮೇಲೂ ಕುಟುಂಬ ಪದ್ಧತಿಯನು ಸಂಬಂಧಿಸಿದ ಕುಟುಂಬವು ನಡುವೆಯೇ ತ್ಯಜಿಸಿ ಬಿಟ್ಟಿದ್ದರೆ, ನ್ಯಾಯಾಲಯಗಳು ಅದಕ್ಕೆ ಮನ್ನಣೆಯೀಯಲಾರವು. ಇಂಥ ಪದ್ಧತಿತ್ಯಾಗ ಆಕಸ್ಮಿಕವಾಗಿರಬಹುದು ಅಥವಾ ಕುಟುಂಬದ ಸಮ್ಮತಿಯಿಂದಲೇ ನಡೆದಿರಬಹುದು; ಏನಾದರೂ ಪರಿಣಾಮವೊಂದೆ. ಒಮ್ಮೆ ತ್ಯಜಿಸಲಾದ ರೂಢಿ ಅಥವಾ ಪದ್ಧತಿಗಳಿಗೆ ಜೀವದಾನ ಮಾಡುವದರಿಂದ ಅನಾವಶ್ಯಕ ಗೊಂದಲ–ವಿವಾದಗಳುಂಟಾಗುವವೆಂದು ನ್ಯಾಯಶಾಸ್ತ್ರಜ್ಞರ ಅಭಿಪ್ರಾಯವಾಗಿದೆ, (1C al 186).

## ೨೯ ವಾರಸದಾರ

ಈ ಕಾಯ್ದೆಯ ಮಟ್ಟಿಗೆ ಅಮೃತ್ಯುಲೇಖೀಯ (Intestate) ನಾಗಿ ಮೃತ

ನಾದವನ ಆಸ್ತಿಗೆ ವಾರಸಾಹಕ್ಕು ಪಡೆದಿರುವ ಪ್ರತಿಯೊಬ್ಬನೂ ಮೃತನ ವಾರಸೆ ದಾರನೆನಿಸುತ್ತಾನೆ.

ವ್ಹಾರ್ಟನ್ನನ ಕಾನೂನು ನಿಘಂಟು(Wharton's Law Lexicon)ವಾರ ಸದಾರ(Heir) ನೆಂದರೆ: ಯಾರು ತನ್ನ ತಂದೆಯ ಇಲ್ಲವೆ ಪೂರ್ವಜನ ಮರಣಾ ನಂತರ ಆತನ ಭೂಮಿ, ಮನೆ ಹಾಗೂ ಪಿತ್ರಾರ್ಜಿತಗಳನ್ನು ವಾರಸಾಗೀತ್ಯಾ ಪಡೆಯಲು ಹಕ್ಕುದಾರನಾಗುವನೋ ಅಂಥ ವ್ಯಕ್ತಿಯೆಂದು ಹೇಳುತ್ತದೆ. ಈ-ವ್ಯಾಖ್ಯೆಯ ಬೆಳಕಿನಲ್ಲಿ ಪೂರ್ವಜ ಅಥವಾ ಪಿತೃ (Ancestor) ಮೃತನಾಗುವ ವರೆಗೂ ವಾರಸದಾರ ಅಸ್ತಿತ್ವದಲ್ಲಿ ಬರುವದಿಲ್ಲವೆಂದು ಸ್ಪಷ್ಟವಿದೆ. ಪಿತೃ (Ance tor) ಮೃತನಾದ ಕ್ಷಣವೇ ವಾರಸಾಹಕ್ಕು ಉದ್ಭೂತವಾಗುತ್ತದೆ; ಅಂಥ ಹಕ್ಕು ಯಾರಿಗೆ ಸಲ್ಲುವುದೋ ಅವರು ವಾರಸದಾರರೆನಿಸುತ್ತಾರೆ. ಎಂತಲೇ "ಜೀವಂತ ನಾಗಿರುವವನಿಗೆ ಯಾರೂ ವಾರಸದಾರರಾಗಲು ಸಾಧ್ಯವಿಲ್ಲ" ಎಂದು ಹ್ಯಾಲ್ಸಬರಿ ಕಾನೂನು ಸಂಗ್ರಹದಲ್ಲಿ (Halsbury's Laws Of England VOL 28 Page 749)ಹೇಳಿರುವುದು ಯಥಾರ್ಥವಾಗಿದೆ. ತಾಂತ್ರಿಕವಾಗಿಯೂ "ವಾರಸದಾರ" ಪದಕ್ಕೆ ಇದೇ ಸರಿಯಾದ ಅರ್ಥವೆಂದು ಅನೇಕ ಕೋರ್ಟು ತೀರ್ಮಾನಗಳಿಂದ ಧೃಢೀಕೃತವಾಗಿದೆ, (1939 Cal. 206).

## ೩೦ ಅಮೃತ್ಯುಲೇಖೀಯ

"Intes ate" ಎಂಬ ಇಂಗ್ಲೀಷ ಪದಕ್ಕೆ ಸಮಾನಾರ್ಥವಾಗಿ ಈ ಪದವನ್ನು ಕನ್ನಡದಲ್ಲಿ ಬಳಸಲಾಗಿದೆ. ಈ ಕಾಯ್ದೆಯ ಅಮೃತ್ಯುಲೇಖೀಯತೆ (Intestacy) ಇಂಡಿಯನ್ ಸಕ್ಸೆಶನ್ ಆ್ಯಕ್ಟಿನ ಅಂಥದೇ ವ್ಯಾಖ್ಯೆಗೆ ಬಹುತರ ಸಮಾನವಾಗಿದೆ.

ಒಬ್ಬ ವ್ಯಕ್ತಿ ತನ್ನ ಆಸ್ತಿಯ ವ್ಯವಸ್ಥೆಯ ಬಗೆಗೆ ಯಾವುದೇ ಮೃತ್ಯುಲೇಖ ಮಾಡದೆ ಮೃತನಾದರೆ, ಇಲ್ಲವೆ ಮೃತ್ಯುಲೇಖವೊಂದನ್ನು ಮಾಡಿದ್ದರೂ ಅದು ಶಾಸನ ಬದ್ಧವಿರದಿದ್ದರೆ, ಅಥವಾ ಮಾಡಿದ ಮೃತ್ಯುಲೇಖವನ್ನು ಮರಣ ಪೂರ್ವದಲ್ಲೇ-ರದ್ದುಗೊಳಿಸಿದ್ದರೆ, ಇಲ್ಲವೆ ಅದರಲ್ಲಿ ನಿರ್ದಿಷ್ಟರಾದ ಯಾವ ವಾರಸದಾರರೂ ಇರ ಲಿಲ್ಲವಾಗಿ ಅದು ವಿಫಲವಾದರೆ-ಅಂಥವ್ಯಕ್ತಿ ಅಮೃತ್ಯುಲೇಖೀಯನಾಗಿ ಮೃತನಾದ ನೆಂದು ತಿಳಿಯತಕ್ಕದ್ದೆಂಬುದಾಗಿ ವ್ಹಾರ್ಟನ್ನನ ಕಾನೂನು ನಿಘಂಟು ಹೇಳುತ್ತದೆ. ಅಮೃತ್ಯುಲೇಖೀಯತೆ ಮೃತನ ಪೂರ್ಣಆಸ್ತಿಗೆ ಸಂಬಂಧಿಸಿರಬಹುದು. ಅಥವಾ ಆಸ್ತಿಯ ಕೆಲ ಭಾಗಕ್ಕೆ ಮಾತ್ರ ಸಂಬಂಧಿಸಿರಬಹುದು.

## ೩೧ ಸಂಬಂಧಿತ

ಈ ಕಾಯ್ದೆಯಲ್ಲಿ ಬಳಸಲಾದ "ಸಂಬಂಧಿತ" ಪದವನ್ನು ಕ್ಲಾಜು(ಜ) ವ್ಯಾಖ್ಯಾಯಿಸುತ್ತದೆ. ಈ ಕ್ಲಾಜಿನನ್ವಯ "ಸಂಬಂಧ ವೆಂದರೆ "ಔರಸ ಸಂಬಂಧ" ಮಾತ್ರ. ಆದರೆ ಕ್ಲಾಜಿನ ಕೊನೆಯಲ್ಲಿ ಅನೌರಸ ಮಕ್ಕಳನ್ನೂ ವಿಶಿಷ್ಟ ಸಂದರ್ಭದಲ್ಲಿ "ಸಂಬಂಧಿತ" ಶಬ್ದದ ಅವಕಾಶದಲ್ಲಿ ಸಮಾವಿಷ್ಟಗೊಳಿಸತಕ್ಕದ್ದೆಂದು ವಿಧಿಸಲಾಗಿದೆ. ಅನೌರಸಮಕ್ಕಳು ತಮ್ಮ ತಾಯಿಯಿಂದಲೂ ಹಾಗೂ ತಮ್ಮತಮ್ಮೊಳಗೂ ವಾರಸಾ ಪಡೆಯಲು ಆತಂಕವಿರಕೂಡದೆಂಬುದು ಈ ವಿಶೇಷ ಏರ್ಪಾಡಿನ ಉದ್ದೇಶವಾಗಿದೆ. ಅನೌರಸರಿಂದ,ಅವರ ಔರಸ ಅನುವಂಶಿಕರು (Descendants) ವಾರಸಾ ಪಡೆಯುವದಕ್ಕೂ ಈ ವ್ಯಾಖ್ಯೆಯಿಂದ ಅವಕಾಶವುಂಟಾಗುತ್ತದೆ.

## ೩೨ ಪರಿಮಿತಿ (Proviso)

ಅನೌರಸ ಮಕ್ಕಳಿಗೆ ಸಂಬಂಧಿಸಿದ ಕೊನೆಯ ಪರಿಮಿತಿಯ ಮೂಲಕ ಅಲ್ಲಿ ನಿರ್ದಿಷ್ಟರಾದ ಸಂಬಂಧಿಕರೊಡನೆ ಅನೌರಸರ (Illegitimate) ಸಂಬಂಧವು ಔರಸ (Legitimate) ವೆಂದೇ ಪರಿಗಣಿಸತಕ್ಕದ್ದೆಂದು ವಿಧಿಸಲಾಗಿದೆ. ಇಂಥ ಸಂಬಂಧಿಕರೆಂದರೆ ಅನೌರಸ ಮಗುವಿನ (೧) ತಾಯಿ, (೨) ಅನೌರಸ ಸೋದರ ಸೋದರಿಯರು, ಮತ್ತು (೩) ಮಗುವಿನ ಔರಸ ಅನುವಂಶಿಕರು.

ಈ ಕಾಯ್ದೆ ಜಾರಿಗೆ ಬಂದನಂತರ ಅನೌರಸ ಮಕ್ಕಳಿಗೆ ತಮ್ಮ ಪ್ರತೀತ (Putative) ತಂದೆಯ ಆಸ್ತಿಗೆ ಯಾವಹಕ್ಕೂ ಉಂಟಾಗಲಾರದು. ಆದರೆ ಅವರ ಜೀವಿತಾಂಶದ (Maintenance) ಹಕ್ಕು ಅಬಾಧಿತವಾಗಿದೆ.

## ಕ. ೪

ಈ ಕಾಯ್ದೆಯ ವರಿಷ್ಠತೆ

[೧] ಈ ಕಾಯ್ದೆಯಲ್ಲಿ ಸುವ್ಯಕ್ತವಾಗಿ ಅನ್ಯಥಾ ಏರ್ಪಾಡು ಮಾಡಲಾಗಿರುವ ವಿನಾ:—

ಅ ಈ ಕಾಯ್ದೆಯಲ್ಲಿ ಏರ್ಪಾಡು ಮಾಡಲಾದ ಯಾವುದೇ ವಿಷಯವನ್ನು ಕುರಿತಾಗಿ ಈ ಕಾಯ್ದೆ ಜಾರಿಗೆ ಬರುವ ಮೊದಲು ಊರ್ಜಿತದಲ್ಲಿದ್ದ ಹಿಂದೂ ಕಾನೂನಿನ ಯಾವುದೇ ಪಾಠ, ನಿಯಮ ಅಥವಾ ಅರ್ಥೀಕರಣವಾಗಲಿ, ಇಲ್ಲವೇ ಹಿಂದೂ

ಕಾನೂನಿನ ಭಾಗವೆನಿಸಿದ್ದ ಯಾವುದೇ ರೂಢಿ ಅಥವಾ ಪದ್ಧತಿಯಾಗಲಿ, ಅನೂರ್ಜಿತವಾಗತಕ್ಕದ್ದು.

ಬ ಈ ಕಾಯ್ದೆಯ ಏರ್ಪಾಡುಗಳಿಗೆ ವಿಸಂಗತವಾಗಿರುವ ಮಟ್ಟಿಗೆ, ಈ ಕಾಯ್ದೆ ಜಾರಿಗೆ ಬರುವ ಮುಂಚೆ ಊರ್ಜಿತವಲ್ಲಿದ್ದ ಯಾವುದೇ ಇತರ ಕಾನೂನು ಹಿಂದುಗಳಿಗೆ ಅನ್ವಯಿಸತಕ್ಕದ್ದಲ್ಲ.

[೨] ಸಂಶಯ ನಿವಾರಣೆಗೋಸ್ಕರ, ಈ ಮೂಲಕ ಶ್ರುತಪಡಿಸಲಾಗುವುದೇನಂದರೆ:–ಬೇಸಾಯ ಹಿಡುವಳಿಗಳ ತುಂಡಾಗುವಿಕೆಯನ್ನು ತಡೆಯುವ ಕುರಿತಾಗಲಿ, ಇಂಥ ಹಿಡುವಳಿಗಳ ಭಾಪಣಿ (Ceiling) ನಿರ್ಧಾರ ಅಥವಾ ಗೇಣಿವಾರಿಕೆಯ ಹಕ್ಕಿನ ಅನುಪ್ರಾಪ್ತಿಯನ್ನು (Devolution) ಕುರಿತಾಗಲಿ, ಈಗಾಗಲೇ ಊರ್ಜಿತದಲ್ಲಿರುವ ಯಾವುದೇ ಕಾನೂನಿನ ಏರ್ಪಾಡುಗಳಿಗೆ, ಈ ಕಾಯ್ದೆಯಲ್ಲಡಕವಾದುದಾವುದೂ ವ್ಯತ್ಯಯಕಾರಕವೆಂದು ಪರಿಗಣಿಸಕೂಡದು.

## ಟೀಕೆ

### ೩೩ ಕಲಮಿನ ಉದ್ದೇಶ ಹಾಗೂ ವ್ಯಾಪ್ತಿ

ಈ ಕಲಮು, ಪ್ರಸ್ತುತ ಕಾಯ್ದೆಯ ಏರ್ಪಾಡುಗಳಿಗೆ ವಿಸಂಗತವಾದ ಯಾವುದೇ ಶಾಸನರೂಪವಾದ ಇಲ್ಲವೇ ಇತರೇ ಸ್ವರೂಪದ ಕಾನೂನುಗಳನ್ನು ರದ್ದುಪಡಿಸ ಬಯಸುತ್ತದೆ. ಕಾಯ್ದೆಯಲ್ಲೇ ಸುವ್ಯಕ್ತವಾದ ರಕ್ಷಣೆಯಿದ್ದ (Saving) ಹೊರತು, ಈ ಕಾಯ್ದೆಯಲ್ಲಡಕವಾದ ಯಾವುದೇ ವಿಷಯದಲ್ಲಿ, ಸದ್ಯದಲ್ಲಿ ಜಾರಿಯಲ್ಲಿರುವ ಇನ್ನಾವುದೇ ಕಾನೂನಿನಮೇಲೆ ಈ ಕಾಯ್ದೆಯ ಏರ್ಪಾಡುಗಳೇ ವರಿಷ್ಠವೆಂದೂ, ಅವಕ್ಕೆಮಾತ್ರ ಕಾನೂನೆಂಬ ಮನ್ನಣೆಯುಂಟೆಂದೂ, ಈ ಕಲಮಿನ ಭಾಷೆಯಿಂದ ತೀರ ಸ್ಪಷ್ಟವಾಗುತ್ತದೆ.

ಈ ಕಲಮಿನ ವ್ಯಾಪ್ತಿಯು, ಈ ಕಾಯ್ದೆಯಲ್ಲಿ ಏರ್ಪಾಡಾಗಿರುವ ವಿಷಯಗಳಮಟ್ಟಿಗೆ ಮಾತ್ರವಿರುತ್ತದೆ. ಈ ಕಾಯ್ದೆಯಲ್ಲಿ ಏರ್ಪಾಡಾಗದಿರುವ ವಿಷಯಗಳನ್ನು ಕುರಿತಾಗಿ ಊರ್ಜಿತದಲ್ಲಿರುವ ಹಿಂದೂಕಾನೂನಿನ, ರೂಢಿಯ, ಇಲ್ಲವೆ

ಇತರೇ ಕಾನೂನಿನ ಏರ್ಪಾಡುಗಳಿಗೆ ಈ ಕಲಮಿನಿಂದ ಬಾಧೆಯಿಲ್ಲ. ಹಿಂದಿನ ಹಿಂದೂಕಾನೂನಿಗೂ ಮತ್ತು ಈ ಕಾಯ್ದೆಗೂ ಪರಸ್ಪರ ವಿರೋಧ ಉದ್ಭೂತವಾಗ ಬಾರದೆಂದು ಈ ಕಲಮನ್ನು ಏರ್ಪಡಿಸಲಾಗಿದೆ.

## ೩೪ ರಕ್ಷಿತ ವಿಷಯಗಳು

ಸುವ್ಯಕ್ತವಾಗಿ ರಕ್ಷಿತವಾದ ಅಥವಾ ವಿನಾಯಿಸಲ್ಪಟ್ಟ ಕೆಲ ವಿಷಯಗಳಿಗೆ ಈ ಕಾಯ್ದೆಯ ಏರ್ಪಾಡುಗಳು ಅನ್ವಯಿಸುವದಿಲ್ಲವಾಗಿ, ಅಂಥ ವಿಷಯಗಳಲ್ಲಿ ಈ ಪೂರ್ವದ ಹಿಂದೂಕಾನೂನು, ಅಥವಾ ಇನ್ನಿತರ ಊರ್ಜಿತದಲ್ಲಿದ್ದ ಕಾನೂನು, ಇನ್ನುಮುಂದೆಯೂ ಶಾಸನವೆನಿಸುತ್ತದೆ ಹೀಗೆ ರಕ್ಷಿತವಾಗಿರುವ ವಿಷಯಗಳಲ್ಲಿ ಕೆಳಗಿನವುಗಳು ಗಮನಾರ್ಹವಾಗಿವೆ–

(೧) ವಿಶೇಷ ವಿವಾಹ ಕಾಯ್ದೆಗನುಸರಿಸಿ ವಿವಾಹಿತರಾದ ಹಿಂದುಗಳ ಆಸ್ತಿಯ ವಾರಸಾಕ್ರಮ ( ಕ. ೫ [೧] ),

(೨) ವಿಶಿಷ್ಟ ಕರಾರುಗಳನ್ವಯ ವಿಲೀನಹೊಂದಿದ ಸಂಸ್ಥಾನಿಕರ ಅವಿಭಾಜ್ಯ ಆಸ್ತಿಗಳ ವಾರಸಾಕ್ರಮ ( ಕ. ೫ [೨] ),

(೩ ಕಾನೂನು ನಿರ್ಮಿಸಿದ ಕೆಲವು ಅವಿಭಾಜ್ಯ ಆಸ್ತಿಗಳ ವಾರಸಾಕ್ರಮ ( ಕ. ೫ [೨] ),

(೪) ವಾಲಿಯಮ್ಮ ಥಪೂರಾನ ಕೊವಿಲಗಂ ಇಸ್ಟೇಟಿನ ವಾರಸಾಕ್ರಮ ( ಕ. ೫ [೩] ),

೫) ಮಿತಾಕ್ಷರ ಸಮಾಯಕದಲ್ಲಿನ ಬಾಧ್ಯಸ್ತಿಕೆಗೆ, ಸ್ತ್ರೀವಾರಸದಾರರಿಲ್ಲದಿರುವಾಗಿನ ವಾರಸಾಕ್ರಮ ( ಕ. ೬ ),

(೬) ಹಿಡುವಳಿಭಾವಣಿ,- ತುಂಡುಭೂಮಿ, ಗೇಣಿದಾರಿಕೆ ಮೊದಲಾದ ವಿಷಯಗಳನ್ನು ಕುರಿತಾದ ಶಾಸನಗಳಿಗೆ ಬಾಧಕವೆನಿಸದಂತೆ ಬೇಸಾಯ ಆಸ್ತಿಗಳ ಅನುಪ್ರಾಪ್ತಿ ಕ್ರಮ ( ಕ. ೪ [೨] ).

## ೩೫ ಈ ಕಾಯ್ದೆಯ ವಶಿಷ್ಟತೆ

ಪ್ರಸ್ತುತ ಕಾಯ್ದೆ ಹಿಂದೂ ವಾರಸಾಕ್ರಮವನ್ನು ಕುರಿತಾದ ಕಾನೂನನ್ನು ಕ್ರೋಢೀಕರಿಸುವ ಶಾಸನವಾಗಿದೆ. ಈ ಕ್ರೋಢೀಕೃತ ಶಾಸನವು ವಾರಸಾ ವಿಷಯ

ಕವಾದ ಹಿಂದೂ ಕಾನೂನನ್ನು ಕೇವಲ ಶ್ರುತಪಡಿಸುವುದು (Declare) ಮಾತ್ರ ವಲ್ಲದೆ, ಆ ವಿಷಯಕವಾಗಿ ಕಾನೂನೇನೆಂಬ ಬಗ್ಗೆ ಈ ಕಾಯ್ದೆಯ ಲಿಖಿತಪಾಠವೇ ಅಧಿಕೃತ ಪ್ರಮಾಣವೆಂದು ವಿಧಿಸುತ್ತದೆ. ಅರ್ಥಾತ್ ಇನ್ನು ಮೇಲೆ ಹಿಂದೂವಾರ ಸಾಕ್ರಮಕ್ಕೆ ಸಂಬಂಧಿಸಿದ ಯಾವುದೇ ಪ್ರಶ್ನೆಯನ್ನು ಕುರಿತು ಕಾನೂನೇನೆಂದರಿ ಯಲು ಆಯಾಯ ಪ್ರಶ್ನೆಯಮೇಲೆ ನ್ಯಾಯಾಲಯ ನಿರ್ಣಯಗಳೆಂತಿವೆಯೆಂದು ಪರಿಶೋಧಿಸುವ ಅಗತ್ಯವಿಲ್ಲ; ಆ ವಿಷಯಕವಾಗಿ ಕಾನೂನೇನೆಂಬುದನ್ನು ಈ- ಕಾಯ್ದೆಯ ಲಿಖಿತ ಏರ್ಪಾಡುಗಳಿಂದ ಮಾತ್ರ ಅಧಿಕೃತವಾಗಿ ಅರಿತುಕೊಳ್ಳಬ ಹುದು. ಗೋಕುಲಮದನ ವಿ. ಪದ್ಮಾನಂದಸಿಂಗ (28 Cal 528) ಪ್ರಕರಣದಲ್ಲಿ ಕಲ್ಕತ್ತಾ, ಹೈಕೋರ್ಟ ನ್ಯಾಯಮೂರ್ತಿಗಳು ವಿಧಿಸಿರುವಂತೆ, ಯಾವ ವಿಷಯಗಳಲ್ಲಿ ಕ್ರೋಢೀಕರಣ (Code)ಮುಖಾಂತರ ಕಾನೂನು ಶ್ರುತಪಟ್ಟಿದೆಯೋ (Declare) ಆ ವಿಷಯದಲ್ಲಿ ಅದು ಸರ್ವಂಕಷವಾಗಿರುವುದು ಅವಶ್ಯವಿದೆ. ಅಂಥ ವಿಷಯಗಳ ಕುರಿತಾದ ಏರ್ಪಾಡುಗಳ ಅರ್ಥವಿವರಣೆಗೋಸ್ಕರ ನ್ಯಾಯಾಲಯಗಳು ಕ್ರೋಢೀ- ಕರಣದ ಪಾಠವೇ (Text) ತಳಹದಿಯೆಂದು ತಿಳಿಯಬೇಕಲ್ಲದೆ, ಇನ್ನಾವುದೇ- ಬಾಹ್ಯಪ್ರಮಾಣವು ಸ್ವೀಕರಿಸಲನರ್ಹವೆಂದು ಬಗೆಯತಕ್ಕದ್ದು.

ಹಿಂದೂ ವಾರಸಾ ಕ್ರಮವನ್ನು ಕುರಿತಾಗಿ ಪ್ರಸ್ತುತ ಕಾಯ್ದೆಯೇ ಶಾಸನ ವೆನಿಸುವುದಾದ್ದರಿಂದ, ಈ ಕಾಯ್ದೆ ಏರ್ಪಾಡುಮಾಡಿರುವ ವಿಷಯಗಳಲ್ಲಿ, ಈ ಕಾಯ್ದೆಯೇ ವರಿಷ್ಠವೆನಿಸುತ್ತದೆ. ಕಾರಣ ಇಂಥ ಏರ್ಪಾಡುಗಳಿಗೆ ಸಂಬಂಧಿಸಿದ ಈ ಮೊದಲಿನ ಹಿಂದೂಕಾನೂನು ರದ್ದಾಯಿತೆಂದೇ ಪರಿಗಣಿಸತಕ್ಕದ್ದು. ಆದರೆ, ಈ ಕಾಯ್ದೆಯಲ್ಲಿ ಸುವ್ಯಕ್ತವಾಗಿಯೇ ವಿನಾಯಿಸಲ್ಪಟ್ಟ ಕೆಲ ವಿಷಯಗಳಲ್ಲಿ ಈ- ಮೊದಲಿನ ಹಿಂದೂಕಾನೂನೇ ಕಾನೂನೆನಿಸುವದೆಂಬು ಬೇರೆ ಹೇಳುವ ಅಗತ್ಯವಿಲ್ಲ.

## ೩ ಕೆಲವು ಕೇಂದ್ರ ಕಾಯ್ದೆಗಳು

ಈ ಕಾಯ್ದೆ ಜಾರಿಗೆಬರುವ ಪೂರ್ವದಲ್ಲಿ ಹಿಂದೂ ಕಾನೂನಿನ ಅನೇಕ ಏರ್ಪಾಡುಗಳನ್ನು ಕೇಂದ್ರ ಶಾಸನ ಸಭೆಯು ಕಾಯ್ದೆಗಳ ಮೂಲಕ ತಿದ್ದುಪಡಿ ಮಾಡುತ್ತ ಬಂದಿದೆ. ಇಂಥ ತಿದ್ದುಪಡಿ ಕಾಯ್ದೆಗಳಲ್ಲಿ ಕೆಲವನ್ನು ಪ್ರಸ್ತುತ ಕಾಯ್ದೆಯ ೩೦ ನೆಯ ಕಲಮಿನಲ್ಲಿ ಸುವ್ಯಕ್ತವಾಗಿ ರದ್ದು (Repeal) ಪಡಿಸಲಾ ಗಿದೆ. ೩೦ ನೆಯ ಕಲಮು ನಿರ್ದಿಷ್ಟಪಡಿಸದ ಕೇಂದ್ರ ಕಾಯ್ದೆಗಳು ಸುವ್ಯಕ್ತವಾಗಿ ಎಲ್ಲಿಯೂ ರದ್ದುಗೊಳಿಸಲ್ಪಟ್ಟಿಲ್ಲವಾದ್ದರಿಂದ, ಅವು ಈಗಲೂ ಊರ್ಜಿತದಲ್ಲಿವೆಯೆ ನ್ನಬಹುದು. ಸಂಸತ್ತು ಇವುಗಳನ್ನು ರದ್ದುಪಡಿಸಲಿಷ್ಟಪಟ್ಟಿದ್ದರೆ, ಇವನ್ನೂ ಸಹ ಸುವ್ಯಕ್ತವಾಗಿ ಈ ಕಾಯ್ದೆಯ ಏರ್ಪಾಡುಗಳ ಮೂಲಕ ರದ್ದುಗೊಳಿಸುತ್ತಿತ್ತು.

ಹಾಗೆ ಮಾಡಿಲ್ಲವಾದ್ದರಿಂದ ಸಂಸತ್ತಿಗೆ ಅವನ್ನು ರದ್ದುಪಡಿಸುವ ಉದ್ದೇಶವಿರಲಿಲ್ಲ ವೆಂದು ಅರ್ಥವಾಗುತ್ತದೆ.

ಈ ಕಾಯ್ದೆಗಳು ಸೂಚ್ಯವಾಗಿಯಾದರೂ ರದ್ದಾಗಿವೆಯೆಂದು ಪರಿಗಣಿಸಲು ಅವಕಾಶವಿಲ್ಲ. ಕಾನೂನುಗಳನ್ನು ಈ ರೀತಿಯಾಗಿ ಅರ್ಥೀಕರಿಸುವುದು ಬಹುತರ ವಾಗಿ ಅಸಮ್ಮತವೆನಿಸಿವೆ. ಪೂರ್ವದ ಯಾವುದೊಂದು ಕಾಯ್ದೆಯನ್ನು, ನಂತರದ ಕಾಯ್ದೆಯು ಸೂಚ್ಯವಾಗಿ ರದ್ದುಪಡಿಸುವುದೆಂದು ಪರಿಗಣಿಸಬೇಕಾದರೆ, ಅವೆರಡೂ ಕಾಯ್ದೆಗಳು ಪರಸ್ಪರವಾಗಿ ತೀರವಿರುದ್ಧವಿದ್ದಾಗ ಮಾತ್ರ ಸಾಧ್ಯವೆಂದು AIR 1949 Oriss 46 ತೀರ್ಮಾನದಲ್ಲಿ ಹೇಳಲಾಗಿದೆ. ಪೂರ್ವದ ಕಾಯ್ದೆ, ನಂತ ರದ ಕಾಯ್ದೆಗೆ ತೀರ ವಿಸಂಗತವಾಗಿದ್ದರೆ, ಪೂರ್ವದ ಕಾಯ್ದೆಯ ಏರ್ಪಾಡುಗಳು ನಂತರದ ಏರ್ಪಾಡುಗಳಿಗೆ ಸ್ಥಳಮಾಡಿಕೊಡಬೇಕಾಗುವದು.

## ೩೭ ರಾಜ್ಯ ಶಾಸನಗಳು

ಭಾರತೀಯ ಸಂವಿಧಾನದ ಆರ್ಟಿಕಲ್ ೨೪೬ ರನ್ವಯ ಸಂವಿಧಾನದ ೭ನೆಯ ಪರಿ ಶಿಷ್ಟದ ೩ನೇಯ ಯಾದಿಯಲ್ಲಿ ಸಮಾವಿಷ್ಟವಾಗಿರುವ ವಿಷಯಗಳನ್ನು ಕುರಿತು ರಾಜ್ಯ ಶಾಸನಸಭೆಗಳಿಗೆ ಕಾಯ್ದೆಮಾಡುವ ಅಧಿಕಾರವಿದೆ. ಅಮೃತ್ಯುಲೇಖೀಯತೆ (Inte-state) ಹಾಗೂ ವಾರಸಾಕ್ರಮ (Succession) ಗಳು ಹಾಗೆ ಸಮಾವಿಷ್ಟವಾದ ವಿಷಯಗಳಾಗಿವೆ. ಈ ವಿಷಯಗಳನ್ನು ಕುರಿತು ರಾಜ್ಯ ಶಾಸನ ಸಭೆಗಳು ಮಾಡಿದ ಕಾಯ್ದೆ, ಸಂಸತ್ತು ಮಾಡಿದ ಕಾಯ್ದೆಗೆ ವಿಸಂಗತವೋ, ವಿರುದ್ಧವೋ, ಆಗಿರುವ ಮಟ್ಟಿಗೆ ಆ ಕಾಯ್ದೆ ರದ್ದಾಯಿತೆಂದು ಪರಿಗಣಿಸಲಾಗುತ್ತದೆ. ಮತ್ತು ಆ ಮಟ್ಟಿಗೆ ಸಂಸತ್ತಿನ ಕಾಯ್ದೆಯೇ ಅಧಿಕೃತವೆನಿಸುತ್ತದೆ. ಫಲವಾಗಿ ಈ ಮೊದಲು ರಾಜ್ಯ ಶಾಸನ ಸಭೆಗಳೇನಾದರೂ ವಾರಸಾ ಕ್ರಮಕ್ಕೆ ಸಂಬಂಧಿಸಿ ಕಾಯ್ದೆಗಳನ್ನು ಮಾಡಿ ದ್ದರೆ ಅವೆಲ್ಲ ಪ್ರಸ್ತುತ ಕಾಯ್ದೆಯ ಏರ್ಪಾಡುಗಳಿಗೆ ವಿಸಂಗತ ಇಲ್ಲವೆ ವಿರುದ್ಧ ವಾಗಿರುವ ಮಟ್ಟಿಗೆ ರದ್ದಾಗುತ್ತವೆ.

## ೩೮ ಪೂರ್ವಾನ್ವಯಿಕತೆ

ಶಾಸನ ( Legislation ) ಗಳು ಸಾಮಾನ್ಯವಾಗಿ ಉತ್ತರಾನ್ವಯಿಕ (Prospective) ವಾಗಿರುತ್ತವಲ್ಲದೆ ಪೂರ್ವಾನ್ವಯಿಕ (Retrospective) ವಾಗಿರುವ ದಿಲ್ಲವೆಂಬುದು ಎಲ್ಲ ನ್ಯಾಯ ಶಾಸ್ತ್ರ ವ್ಯವಸ್ಥೆಗಳಲ್ಲೂ ಸಮ್ಮತವಾದ ತತ್ವವಾಗಿದೆ. ಹೊಸ ಶಾಸನವೊಂದು ಭವಿಷ್ಯತ್ತಿಗೆ ಅನ್ವಯಿಸುವುದಲ್ಲದೆ ಭೂತಕಾಲಕ್ಕೆ ಅನ್ವಯ

ಸಲಾರದೆಂಬರ್ಥದ ಲ್ಯಾಟಿನ್ ಸೂಕ್ತಿ ಯೊಂದಿದೆ (Omnis nova constitutio futuris imponere debt non pacteritise). ಯಾವುದೇ ಹೊಸ ಶಾಸನವನ್ನು ಅದರ ಪೂರ್ವದ ಕಾಲಾವಧಿಗೆ ಅನ್ವಯಿಸುವದು ನ್ಯಾಯ ಸಮ್ಮತ ವಾಗಲಾರವೆಂದು ನ್ಯಾಯಶಾಸ್ತ್ರತಜ್ಞರ ಸಾಮಾನ್ಯ ಅಭಿಪ್ರಾಯವಿದೆ. ಶಾಸನ ಗಳನ್ನು ಒಂದು ಪಕ್ಷ ಪೂರ್ವಾನ್ವಯಿಕ ಗೊಳಿಸಿದಾಗಲೂ ಅಂಥ ಪೂರ್ವಾನ್ವಯವು ಸಂಪ್ರಾಪ್ತ ಹಕ್ಕುಗಳಿಗೆ ಬಾಧಕವಾಗದಂತೆಯೂ, ಕೇವಲ ವಿಧಿವಿಷಯ (Procedural matters) ಗಳಿಗಷ್ಟೇ ಅನ್ವಯಿಸುವಂತೆಯೂ, ನೋಡಿಕೊಳ್ಳಲಾಗುತ್ತದೆ. ಯಾವದೊಂದು ಏರ್ಪಾಡು ಪೂರ್ವಾನ್ವಯಿಕವೊ ಉತ್ತರಾನ್ವಯಿಕವೊ ಎಂಬ ಬಗ್ಗೆ ಶಾಸನ ಭಾಷೆಯೇ ದ್ವಂದ್ವಾರ್ಥಕ್ಕೆಡೆ ಕೊಡುತ್ತಿದ್ದರೆ, ಉತ್ತರಾನ್ವಯಿಕತಾ ಪರವಾದ ಅರ್ಥೀಕರಣವೇ ನ್ಯಾಯ ಸಮ್ಮತವೆಂದು ಫೈದರ ಹುಸೇನ ವಿ| ಪೂರಣಮಲ್ (I2 R 58 All 63 ) ಪ್ರಕರಣದಲ್ಲಿ ಅಹಲಾಬಾದ ಹೈಕೋರ್ಟ ನ್ಯಾಯ ಮೂರ್ತಿಗಳು ಅಪ್ಪಣೆ ಕೊಡಿಸಿದ್ದಾರೆ. ವ್ಯಕ್ತಿಯ ವಾರಸಾ ಹಕ್ಕು ಕೇವಲ ಶಾಸನ ವಿಧಿ (legal procedure ) ಗೆ ಸಂಬಂಧಿಸಿದ ವಿಷಯ ವಾಗಿರದೆ ಮಹ ತ್ವದ ಶಾಸನಾಧಿಕಾರ ವೆನಿಸುತ್ತದೆ. ಕಾರಣ ಹಿಂದೂ ವಾರಸಾ ಕಾಯ್ದೆಯ ಏರ್ಪಾ ಡುಗಳನ್ನು ಕಾಯ್ದೆಯ ಭಾಷೆ, ಸಂದರ್ಭ ಅಥವಾ ಉದ್ದಿಷ್ಟಗಳನ್ನು ಲಕ್ಷಿಸಿ ಬೇರೆ ಯಾಗಿ ಅರ್ಥಯಿಸುವ ಅಗತ್ಯ ವಿಲ್ಲದೆ, ಸಾಮಾನ್ಯವಾಗಿ ಉತ್ತರಾನ್ವಯಿಕವಾಗಿಯೇ ಅರ್ಥಯಿಸ ಬೇಕಾಗುತ್ತದೆ.

## ೩೯ ಉಪಕಲಮು (೨)

ಈ ಉಪಕಲಮಿನ ಉದ್ದೇಶ ತೀರ ಸ್ಪಷ್ಟವಾಗಿದೆ. ಭಾರತೀಯ ಒಕ್ಕೂಟದ ವಿವಿಧ ರಾಜ್ಯಗಳಲ್ಲಿ ಭೂಮಿ ತುಂಡಾಗುವದನ್ನು ತಡೆಯುವದಕ್ಕೋಸ್ಕರವೂ, ಗೇಣಿ ದಾರರಿಗೆ ಗೇಣಿಸ್ಥಿರತೆ ಹಾಗೂ ನ್ಯಾಯವಾದ ಪಾಲು ದೊರೆಯುವದಕ್ಕೋಸ್ಕರವೂ, ಹಿಡುವಳಿಗಳು ವಿಶಿಷ್ಟ ಪ್ರಮಾಣವನ್ನು ಮಿಕ್ಕದಂತೆ ಛಾವಣಿ (ceiling) ನಿರ್ಧರಿ ಸುವುದಕ್ಕೋಸ್ಕರವೂ, ಅನೇಕ ಶಾಸನಗಳನ್ನು ಜಾರಿಗೆ ತರಲಾಗುತ್ತಿದೆ. ಗೇಣಿ ದಾರಿಕೆಯ ಹಕ್ಕುಗಳ ಅನುಪ್ರಾಪ್ತಿ (Devolution) ಗೆ ಸಂಬಂಧಿಸಿಯೂ ಕೆಲವು ವಿಶಿಷ್ಟ ಏರ್ಪಾಡುಗಳನ್ನು ಇಂಥ ಶಾಸನಗಳಲ್ಲಿ ಮಾಡಲಾಗಿದೆ. ಭಾರತದ ರೈತಾಪಿ ಜನ ಕೋಟಿಯ ಹಿತಾಭಿವೃದ್ಧಿಗೋಸ್ಕರ ವೆಂದು ಜಾರಿಗೆ ಬರುತ್ತಿರುವ ಈ ಎಲ್ಲ ಶಾಸನಗಳ ಪ್ರಗತಿಪರ ಏರ್ಪಾಡುಗಳಿಗೆ ಪ್ರಸ್ತುತ ಕಾಯ್ದೆಯ ಯಾವುದೇ ಏರ್ಪಾಡು ಬಾಧಕ ವಾಗಕೂಡದೆಂಬುದೇ ಈ ಕಲಮಿನ ಮನೀಷೆಯಾಗಿದೆ.

# ಅಧ್ಯಾಯ ೨

## ಅನ್ವಿತ್ಯುಲೇಖೀಯ ವಾರಸಾ ಕ್ರಮ

## ಸಾಮಾನ್ಯ ವಿಷಯಗಳು

**೫. ಈ ಕಾಯ್ದೆಯು ಕೆಳಗಿನಆಸ್ತಿಗಳಿಗೆ ಅನ್ವಯಿಸತಕ್ಕದ್ದಲ್ಲ:-**

(೧) ವಿಶೇಷ ವಿವಾಹ ಕಾಯ್ದೆ ೧೯೫೪ ರ ಕಲಮು [೨೧] ರ ನಿರ್ಬಂಧಗಳಿಂದಾಗಿ, ಭಾರತೀಯ ವಾರಸಾಕಾಯ್ದೆ (The Indian Succession Act 1925)೧೯೨೫ ರನ್ವಯ ವಾರಸಾಮುಟ್ಟುವ ಯಾವುದೇ ಆಸ್ತಿ,

(೨) ಯಾವುದೇ ಭಾರತೀಯ ಸಂಸ್ಥಾನದ ಅರಸನು ಭಾರತ ಸರಕಾರದೊಡನೆ ಮಾಡಿಕೊಂಡ ಒಡಂಬಡಿಕೆ (Covenant) ಅಥವಾ ಒಪ್ಪಂದ (Agreement) ದನ್ವಯವಾಗಲಿ, ಇಲ್ಲವೆ ಈ ಕಾಯ್ದೆ ಜಾರಿಗೆ ಬರುವ ಪೂರ್ವದಲ್ಲಿ ಪಾಸಾದ ಯಾವುದೇ ಶಾಸನ (Enactment)ದ ಶರ್ತು [Terms) ಗಳಿಗನುಸಾರವಾಗಲಿ, ಒಬ್ಬನೇ ವಾರಸದಾರನಿಗೆ ವಾರಸಾ ಮುಟ್ಟತಕ್ಕ ಆಸ್ತಿ,

(೩) ಜೂನ ೨೯, ೧೯೪೯ ರ ಕೋಚೀನ ಮಹಾರಾಜರ ಘೋಷಣೆಯ ಶರ್ತುಗಳನ್ವಯ ಅರಮನೆಯ ಆಡಳಿತ ಮಂಡಳದ ಆಡಳಿತಕ್ಕೊಳಪಡುವ ವಲಿಯಮ್ಮ ಥಪುರನ್ ಕೋವಿಲಗಂ ಇಸ್ಟೇಟು, ಮತ್ತು ಅರಮನೆಯ ನಿಧಿ.

### ಟೀಕೆ

### ೪೦ ಕಲಮಿನ ವ್ಯಾಪ್ತಿ

ಈ ಕಲಮು ಕೆಲವು ಪ್ರಕಾರದ ಆಸ್ತಿಗಳನ್ನು ಹಿಂದೂ ವಾರಸಾಕಾಯ್ದೆಯ

ಕಾರ್ಯವ್ಯಾಪ್ತಿಯಿಂದ ಹೊರಗಿಡುತ್ತದೆ. ಇಂಥ ಆಸ್ತಿಗಳು ಮೂರುಬಗೆಯವಾಗಿವೆ: (೧) ೧೯೫೪ ರ ವಿಶೇಷ ವಿವಾಹ ಕಾಯ್ದೆಗನುಸರಿಸಿ ವಿವಾಹವಾಗಿರುವ ಕಾರಣ ದಿಂದ ೧೯೨೫ ರ ಭಾರತೀಯ ವಾರಸಾ ಕಾಯ್ದೆಗನುಸರಿಸಿ ವಾರಸಾವುಟ್ಟಬೇಕಾದ ಆಸ್ತಿಗಳು; (೨) ಸಂಸ್ಥಾನಿಕರು ಮತ್ತು ಭಾರತೀಯ ಸರಕಾರದ ನಡುವೆ ಆದ ಒಡಂಬಡಿಕೆಯನ್ವಯ, ಇಲ್ಲವೆ ಯಾವುದೇ ಶಾಸನದನ್ವಯ ಅವಿಭಾಜ್ಯವೆನಿಸುವ (Impartible) ಇಸ್ಟೇಟುಗಳು, ಮತ್ತು (೩) ಕೆಲವು ಜಿವ್ಮೆ ಅಥವಾ ವಿಶ್ವಸ್ತಿಗಳು. ಇವುಗಳನ್ನುಳಿದು ಉಳಿದೆಲ್ಲ ಪ್ರಕಾರದ ಆಸ್ತಿಗಳಿಗೆ ಹಿಂದೂ ವಾರಸಾ ಕಾಯ್ದೆ ಅನ್ವಯಿಸುತ್ತದೆ. ಬೇಸಾಯ ಆಸ್ತಿಗಳನ್ನು ಕುರಿತಾಗಿ ಏರ್ಪಾಡಾದ ಕೆಲವು ರಕ್ಷಣೆಗಳಬಗ್ಗೆ ಈ ಮೊದಲು ವಿವೇಚಿಸಲಾಗಿದೆ

## ೪೧ ವಿಶೇಷ ವಿವಾಹ ಕಾಯ್ದೆಗನ್ವಯ ವಿವಾಹಿತರು

ವಿಶೇಷ ವಿವಾಹಕಾಯ್ದೆ (The Special ma riage Act 1954) ೧೯೫೪ರ ೨೧ ನೇ ಕಲಮು, ಈ ಕಾಯ್ದೆಗನುಸರಿಸಿ ವಿವಾಹಿತರಾದ ವ್ಯಕ್ತಿಗಳಿಗೆ ಅವರು ಯಾವ ಧರ್ಮದವರಾಗಿದ್ದರೂ ಭಾರತೀಯ ವಾರಸಾ ಕಾಯ್ದೆ ( The Indian succession Act 1925 )ಗನುಸರಿಸಿ ಮಾತ್ರ ವಾರಸಾ ವುಟ್ಟತಕ್ಕದ್ದೆಂದು ವಿಧಿಸುತ್ತದೆ. ಹೀಗೆ ವಿಹಾಹಿತರಾದವರ ಸಂತತಿಗೂ ಇದೇ ಮಾತು ಅನ್ವಯಿಸುತ್ತದೆ. ಹಿಂದುವೊಬ್ಬನು ವಿಶೇಷ ವಿವಾಹ ಕಾಯ್ದೆಗನುಸಾರವಾಗಿ ವಿವಾಹಿತನಾದರೆ ಆತನು ತನ್ನ ಮೂಲ ಹಿಂದೂ ಕುಟುಂಬದಿಂದ ಪ್ರತ್ಯೇಕಿತನಾದನೆಂದು ತಿಳಿಯಲಾಗುತ್ತದೆ. ಕಾರಣ ಅವನಿಗೂ ಅವನ ಸಂತಾನಕ್ಕೂ ವಾರಸಾ ವಿಷಯದಲ್ಲಿ ಹಿಂದೂ ವಾರಸಾ ಕಾನೂನು ಅನ್ವಯಿಸದೆ ಭಾರತೀಯ ವಾರಸಾ ಕಾಯ್ದೆಯ ವಾರಸಾ ಏರ್ಪಾಡುಗಳು ಅನ್ವಯಿಸುತ್ತವೆ. ಭಾರತೀಯ ವಾರಸಾ ಕಾಯ್ದೆಯ ವಿಶಿಷ್ಟ ವಾರಸಾ ಏರ್ಪಾಡುಗಳು ಆ ಕಾಯ್ದೆಯ ೩೧ ರಿಂದ ೪೮ ರ ವರೆಗಿನ ಕಲಮುಗಳಲ್ಲಿ ಅಡಕವಾಗಿವೆ.

ವಿಶೇಷ ವಿವಾಹ ಕಾಯ್ದೆಗನುಸರಿಸಿ ವಿವಾಹವಾಗುವ ಹಿಂದೂ ಸ್ತ್ರೀ ಅಥವಾ ಪುರುಷರು ತಮ್ಮ ಪೂರ್ವದ ಹಿಂದೂ ಕುಟುಂಬದಿಂದ ಪ್ರತ್ಯೇಕಿತರಾದರೂ ತಮ್ಮ ಹಿಂದುತ್ವವನ್ನು ಕಳೆದುಕೊಳ್ಳುವದಿಲ್ಲ. ಕಾರಣ ಇಂಥ ವಿವಾಹದಿಂದಾಗಿ ಅವರು ಹಿಂದೂ ವಾರಸಾ ಕಾಯ್ದೆಗನುಸರಿಸಿ ಪಡೆಯಬಹುದಾದ ವಾರಸಾಹಕ್ಕಿಗೆ ವ್ಯತ್ಯಯ ಬರುವ ಕಾರಣವಿಲ್ಲ.

## ೪೨ ಅವಿಭಾಜ್ಯಆಸ್ತಿಗಳು

ಕ್ಲಾಜ (೨) ರನ್ವಯ ಎರಡು ಪ್ರಕಾರದ ಅವಿಭಾಜ್ಯಆಸ್ತಿ( Impartible Estats )ಗಳನ್ನು ಕಾಯ್ದೆಯ ವ್ಯಾಪ್ತಿಯಿಂದ ಹೊರಗಿಡಲಾಗಿದೆ. ಅವೆಂದರೆ, (೧) ಭಾರತೀಯ ಸಂಸ್ಥಾನಿಕರು ಮತ್ತು ಭಾರತ ಸರಕಾರಗಳ ನಡುವೆ ವಿಲಯ ನಕಾಲದಲ್ಲಾದ ಕರಾರುಗಳನ್ವಯ ಅವಿಭಾಜ್ಯ ವಾಗಿರತಕ್ಕದ್ದೆಂದು ಒಪ್ಪಲಾದ ಆಸ್ತಿಗಳು ಮತ್ತು (೨) ಶಾಸನ (Enactmemt) ನಿರ್ಮಿತವಾದ ಅವಿಭಾಜ್ಯ ಆಸ್ತಿಗಳು. ರೂಢಿಗತವಾಗಿ ಅವಿಭಾಜ್ಯವೆಂದು ಪರಿಗಣಿಸಲಾಗುತ್ತಿದ್ದ ಆಸ್ತಿಗಳು ಈ ವಿನಾಯತಿ ಗೊಳಪಡುವದಿಲ್ಲ. ಕಾರಣ ಪರಂಪರಾಗತವಾಗಿ ಅವಿಭಾಜ್ಯವೆಂದು ತಿಳಿಯಲಾಗುತ್ತಿದ್ದ ಸ್ಥನಮ್ ಆಸ್ತಿಗೂ ಈ ಕಾಯ್ದೆಯ ವಾರಸಾಕ್ರಮವೇ ಅನ್ವಯಿಸುತ್ತದೆ.

ಆಸ್ತಿಯ ಅವಿಭಾಜ್ಯತೆ ಮತ್ತು ಒಬ್ಬನಿಗೇ ವಾರಸಾ ಸಲ್ಲುವಿಕೆಗಳನ್ನು ಈ ಕಾಯ್ದೆಯಲ್ಲಿ ಕೇವಲ ಅಪವಾದವೆಂದು ಕೆಲವೇ ಸಂದರ್ಭಗಳಲ್ಲಿ ಮನ್ನಿಸಲಾಗಿದೆ. ಸಾಮಾನ್ಯವಾಗಿ ಎಲ್ಲ ವಾರಸದಾರರು ಏಕ ಕಾಲದಲ್ಲಿ ವಾರಸಾ ಪಡೆಯತಕ್ಕದ್ದೆಂದೂ ವಾರಸಾ ಆಸ್ತಿಯನ್ನು ವಿಭಜಿಸಿ ಕೊಳ್ಳತಕ್ಕದ್ದೆಂದೂ ಈ ಕಾಯ್ದೆಯ ಉದ್ದಿಷ್ಟವಾಗಿದೆ.

ಮೇಲ್ಕಾಣಿಸಿದ ಸಂಸ್ಥಾನಿಕರ ಆಸ್ತಿಯನ್ನು ಈ ಕಾಯ್ದೆಯ ವಾರಸಾಕ್ರಮದಿಂದ ಮುಕ್ತಗೊಳಿಸಿ ಅವನ್ನು ಅವಿಭಾಜ್ಯ ಆಸ್ತಿಗಳೆಂದೇ ಪರಿಗಣಿಸುವ ಏರ್ಪಾಡಿಗೆ ಸಾಂಸತ್ತಿಕ ಸಂಯುಕ್ತ ಸಮಿತಿಯಲ್ಲಿ ವಿರೋಧವಿತ್ತು. ಈ ವಿಧವಾದ ವಿನಾಯತಿ ಸಲ್ಲದೆಂದು ಶ್ರೀಮತಿ ಸಾವಿತ್ರಿ ನಿಗಮ್ ಮತ್ತು ಶ್ರೀ ರಾಜೇಂದ್ರ ಪ್ರತಾಪ ಸಿಂಗ ಅವರು ಭಿನ್ನಾಭಿಪ್ರಾಯ ಟಿಪ್ಪಣಿಯನ್ನು ಕೂಡ ಸಲ್ಲಿಸಿದರು. (Vide Gazette of India Extra Ordinary Part II 26-4-1954)

## ೪೩ ಕ್ಲಾಜ (೩)

ಈ ಕ್ಲಾಜಿನಲ್ಲಿ ಕೋಚೀನ ಮಹಾರಾಜರು, ತಮ್ಮ ಸಂಸ್ಥಾನದ ವಿಲಯನದ ಪೂರ್ವದಲ್ಲಿ ಭಾರತ ಸರಕಾರದ ಮಂಜೂರಾತಿಯೊಂದಿಗೆ ನಿರ್ಮಿಸಿದ ಟ್ರಸ್ಟುಗಳನ್ನು ಹಿಂದೂ ವಾರಸಾ ಕಾಯ್ದೆಯ ಅವಕಾಶದಿಂದ ಮುಕ್ತ ಗೊಳಿಸಲಾಗಿವೆ. ಈ ಟ್ರಸ್ಟುಗಳಿಂದ ಸುಮಾರು ೫೦೦ ಜನ ಲಾಭಪಡೆಯುತ್ತಾರೆ. ಹೀಗೆ ಲಾಭಪಡೆಯುವ ಹಕ್ಕು ಹೇಗೆ ಅನುಪ್ರಾಪ್ತ (Devolve ) ವಾಗತಕ್ಕದ್ದೆಂಬುದು ಹಿಂದೂ ವಾರಸಾ ಕಾಯ್ದೆಗನುಸಾರ ನಿರ್ಧಾರ ವಾಗಲಾರದು.

# ಕ. ೬

ಸಮಾಯಕ ಆಸ್ತಿಯಲ್ಲಿನ ಬಾಧ್ಯತೆಯ ವಾರಸಾ ಕ್ರಮ

ಮಿತಾಕ್ಷರ ಸಮಾಯಕ ಆಸ್ತಿಯಲ್ಲಿ ಬಾಧ್ಯತೆ (Interest) ಯುಳ್ಳ ಹಿಂದೂ ಪುರುಷನೊಬ್ಬನು ಈ ಕಾಯ್ದೆಯು ಜಾರಿಗೆ ಬಂದನಂತರ ಮೃತನಾದಲ್ಲಿ, ಆಸ್ತಿಯಲ್ಲಿನ ಆತನ ಬಾಧ್ಯತೆ (Interest) ಸಮಾಯಕ ಕುಟುಂಬದ ಶೇಷ ಸಮಾಯಕದಾರರಿಗೆ ಶೇಷಾಧಿಕಾರ (Survivorship) ದಿಂದ ಅನುಪ್ರಾಪ್ತ (Devolve) ವಾಗ ಬೇಕಲ್ಲದೆ, ಈ ಕಾಯ್ದೆಗನುಸಾರವಾಗಿಯಲ್ಲ;

ಪರಿಮಿತಿಯೇನಂದರೆ, ಮೃತನು ತನ್ನ ಹಿಂದೆ ಪರಿಶಿಷ್ಟದ ೧ ನೆಯ ವರ್ಗದಲ್ಲಿ ನಿರ್ದಿಷ್ಟಳಾದ ಸ್ತ್ರೀ ವಾರಸದಾರಳನ್ನಾಗಲಿ, ಅಥವಾ ಇಂಥ ಸ್ತ್ರೀ ವಾರಸದಾರಳದ್ವಾರಾ ಹಕ್ಕು ಕೇಳುವಂತಹ, ಅದೇ ವರ್ಗದಲ್ಲಿ ನಿರ್ದಿಷ್ಟನಾದ ಪುರುಷವಾರಸದಾರನನ್ನಾಗಲಿ, ಬಿಟ್ಟು ಹೋಗಿದ್ದಲ್ಲಿ, ಮಿತಾಕ್ಷರ ಸಮಾಯಕ ಆಸ್ತಿಯಲ್ಲಿನ ಮೃತನ ಬಾಧ್ಯತೆಯು ಶೇಷಾಧಿಕಾರದಿಂದ ಅನುಪ್ರಾಪ್ತವಾಗದೆ, ಈ ಕಾಯ್ದೆಗನುಸಾರವಾದ ಮೃತ್ಯುಲೇಖೀಯ ಅಥವಾ ಅಮೃತ್ಯುಲೇಖೀಯ ವಾರಸಾಕ್ರಮಕ್ಕನ್ವಯ- ಅನುಪ್ರಾಪ್ತ (Devolve) ವಾಗತಕ್ಕದ್ದು-

**ವಿವರಣೆ (೧)** ಈ ಕಲಮಿಗೋಸ್ಕರ ಹಿಂದೂ ಮಿತಾಕ್ಷರ ಸಮಾಯಕ ಬಾಧ್ಯಸ್ಥನ ಬಾಧ್ಯತೆ (Interest) ಯೆಂದರೆ ಆತನಿಗೆ ವಾಟಣಿ (Partition) ಕೇಳುವ ಹಕ್ಕು ಇದ್ದಿರಲಿ, ಇಲ್ಲದಿರಲಿ, ಆತನ ಮರಣಪೂರ್ವದಲ್ಲಿ ಆಸ್ತಿಯ ವಾಟಣಿಯಾಯಿತೆಂದು ತಿಳಿದರೆ, ಆತನಿಗೆ ಸಲ್ಲುತ್ತಿದ್ದ ಅದರ ಪಾಲು ಎಂದು ತಿಳಿಯತಕ್ಕದ್ದು.

**ವಿವರಣೆ (೨)** ಈ ಕಲಮಿನ ಪರಿಮಿತಿಯಲ್ಲಡಕವಾದುದಾವುದನ್ನೂ

ಮೃತನ ಮರಣಕ್ಕೆ ಮೊದಲೇ ಸಮಾಯಕ ಬಾಧ್ಯಸ್ತಿ (Coparcenary) ಯಿಂದ ಬೇರೆಯಾವ ವ್ಯಕ್ತಿಗಾಗಲಿ, ಆತನ ವಾರಸದಾರರಿಗಾಲಿ, ಮೇಲ್ಕಾಣಿಸಿದ ಬಾಧ್ಯತೆಯಲ್ಲಿ ಅನ್ಯೃತ್ಯಲೇಖೀಯತೆಯುಂಟಾದಾಗ ಪಾಲು ಕೇಳಲಿಡೆಕೊಡು ವಂತೆ ಅರ್ಥಯಿಸಕೂಡದು.



## ಟೀಕೆ

### ೪೪ ವ್ಯಾಪ್ತಿ ಹಾಗೂ ಉದ್ದೇಶ

ಹಿಂದೂ ಕಾನೂನಿನ ಮಿತಾಕ್ಷರ ಸಂಪ್ರದಾಯದಲ್ಲಿ, ಸ್ತ್ರೀಗೆ ಕೆಲವುಸಲ ವಾಟಿಣಿಯಾದ ಪಕ್ಷದಲ್ಲಿ ಪಾಲುದೊರೆಯುವ ಏರ್ಪಾಡಿವೆಯಾದರೂ, ಅವಳು ಮಿತಾಕ್ಷರ ಸಮಾಯಕ ಬಾಧ್ಯಸ್ತಿ (Coparcenary) ಯ ಸದಸ್ಯಳಲ್ಲ. ವಿಶೇಷ ಶಾಸನಗಳ ಮೂಲಕ ಸ್ತ್ರೀಗೆ ಸಮಾಯಕ ಆಸ್ತಿಯಲ್ಲಿಯೂ ಕೆಲವು ಹಕ್ಕುಗಳನ್ನು ಕೊಟ್ಟಿದ್ದುಂಟು. ಉದಾಹರಣೆಗೆ ೧೯೩೭ರ ಹಿಂದೂಸ್ತ್ರೀಯರ ಆಸ್ತಿಹಕ್ಕಿನ ಕಾಯ್ದೆಯನ್ನು ನೋಡಬಹುದು. ಪ್ರಸ್ತುತ ಕಲಮಿನಲ್ಲಾದರೂ, ಹಿಂದೂ ಸಮಾಯಕ ಬಾಧ್ಯಸ್ತಿಗೆ ವ್ಯತ್ಯಯತಾರದೆ, ಅದರಲ್ಲಿ ಮಗಳಿಗೂ ಪಾಲು ದೊರೆಯುವಂತೆ ಏರ್ಪಾಡುಮಾಡಲಾಗಿದೆ.

ರಾವು ಕಮೀಟೆಯ ಹಿಂದೂಕೋಡಬಿಲ್ಲು, ಮತ್ತು ಸಿಲೆಕ್ಟ ಕಮೀಟೆಯವರು ತಯಾರಿಸಿದ ವಿಧೇಯಕದಲ್ಲಿ ಮಿತಾಕ್ಷರ ಸಮಾಯಕ ಬಾಧ್ಯಸ್ತಿಯನ್ನು ಕೊನೆಗೊಳಿಸಲಾಗಿತ್ತು. ಆ ಬಿಲ್ಲುಗಳಲ್ಲಿ ಮಗಳು ಮತ್ತು ವಿಧವೆಯರಿಗೆ ಮೃತನ ಆಸ್ತಿಯಲ್ಲಿ ಗಂಡುಮಕ್ಕಳೊಡನೆ ಸಮನಾದ ಪಾಲು ಕೊಡಲಾಗಿತ್ತು.

ಈ ಕಾಯ್ದೆಯ ಮೂಲ ವಿಧೇಯಕದಲ್ಲಿ ಮಿತಾಕ್ಷರ ಸಮಾಯಕ ಬಾಧ್ಯಸ್ತಿಯನ್ನು ಪೂರ್ಣವಾಗಿ ಈ ಕಾಯ್ದೆಯ ಅವಕಾಶದಿಂದ ಹೊರಗಿಡಲಾಗಿತ್ತು. ಆದರೆ ವಿಧೇಯಕದ ಸಮಾಲೋಚನೆಗೋಸ್ಕರ ನಿಯಮಿತವಾದ ಸಾಂಸತ್ತಿಕ ಸಂಯುಕ್ತ ಸಮಿತಿಯು ಸಮಾಯಕ ಬಾಧ್ಯಸ್ತಿಯಲ್ಲಿ ಮಗಳಿಗೆ ಪಾಲುಕೊಡದೆ ಈ ಕಾಯ್ದೆ ಪರಿಪೂರ್ಣವಾಗಲಾರದೆಂದು ಅಭಿಪ್ರಾಯಪಟ್ಟು ಪ್ರಸ್ತುತ ಕಲಮಿಗೆ ತಳಹದಿಯಾದ ವಿಧೇಯಕದ ೬ ನೆಯ ಕ್ಲಾಜನ್ನು ತಯಾರಿಸಿತು. ಮೂಲ ಕ್ಲಾಜಿನಲ್ಲಿ ವಿವರಣೆ (ಅ) ಮತ್ತು (ಬ) ಗಳು ಕೆಳಗಿನಂತಿದ್ದವು.

(ಅ) ಆತನ ಎಲ್ಲ ಅವಿಭಕ್ತ ಪುರುಷ ಆನುವಂಶಿಕರ ಸಮಾಯಿಕ ಬಾಧ್ಯಸ್ಥಿಯಲ್ಲಿನ ಬಾಧ್ಯತೆ.

(ಬ) ಮೃತನ ಮರಣಪೂರ್ವದಲ್ಲಿ ಮತ್ತು ಈ ಕಾಯ್ದೆ ಜಾರಿಗೆಬಂದನಂತರ ಬೇರೆಯಾಗಿ ಪಾಲುಕೊಂಡಿರುವ ಪುರುಷ ಆನುವಂಶಿಕನ ಪಾಲಿಗೆ ಹೋಗಿರುವ ಬಾಧ್ಯತೆ, (ವಾಟಣಿಯಾಗಿದ್ದರೂಸಹ).

ರಾಜ್ಯಸಭೆಯು ಕ್ಲಾಜ (ಬ) ವನ್ನು ತೆಗೆದುಹಾಕಿತು. ಆದರೆ, ಮಗಳಿಗೆ ಮಗನೊಡನೆ ಸಮನಾಗಿ ಪಾಲು ನಲ್ಲಲೆಂದು (ಅ) ಕ್ಲಾಜನ್ನು ಹಾಗೆಯೇ ಇಟ್ಟಿತು. ಆದರೆ ರಾಜ್ಯಸಭೆಯು ಸಮಾಯಿಕ ಆಸ್ತಿಯಲ್ಲಿನ ಬಾಧ್ಯತೆಯನ್ನು ಮೃತ್ಯುಲೇಖ ದ್ವಾರಾ ವಿಲೇವಾರಿ ಮಾಡಬಹುದೆಂದು ಏರ್ಪಡಿಸಿ, ಸ್ತ್ರೀವಾಸಸದಾರಳ ವಾರಸಾಹಕ್ಕಿಗೆ ಮೃತ್ಯುಲೇಖೀಯ ವ್ಯವಸ್ಥೆಯಿಂದ ಬಾಧೆಬರುವ ಹಾಗೆಮಾಡಿತು.

ಲೋಕಸಭೆಯಲ್ಲಿ ಕ್ಲಾಜ (೬) ಪ್ರಸ್ತುತ ೬ ನೆಯ ಕಲಮಿನಸ್ವರೂಪ ತಳೆಯಿತು. ಈ ಕಲಮು ಮಗಳು ಹಾಗೂ ಇತರ ಸ್ತ್ರೀ ವಾರಸದಾರರು ಅವಿಭಕ್ತ ಪುತ್ರರೊಡನೆ ಸಮನಾಗಿ ಪಾಲು ಪಡೆಯುವ ಅವಕಾಶವನ್ನು ಅಸಾಧ್ಯಗೊಳಿಸಿವೆ. ಯಾಕಂದರೆ ಈಗ ಮಗಳು ಮೃತನ ಸಾಮಾಯಿಕ ಆಸ್ತಿಯಲ್ಲಿನ ಸ್ವಂತ ಬಾಧ್ಯತೆಯಲ್ಲಿ ಮಾತ್ರ ಪಾಲು ಪಡೆಯಬಲ್ಲಳು. ಮಗನಾದರೋ, ತಂದೆಯೊಡನೆ ಸಮಾಯಿಕ ಬಾಧ್ಯಸ್ತನೆಂದು ಸಮಾಯಿಕ ಆಸ್ತಿಯಲ್ಲಿ ಪಾಲು ಪಡೆಯುವನಲ್ಲದೆ, ತಂದೆಯ ಪಾಲಿಗೆ ಬರುವ ಸಮಾಯಿಕ ಆಸ್ತಿಯ ಪಾಲಿನಲ್ಲಿ ಆತನ ಮರಣಾಂತರ ಮಗಳೊಡನೆಯೂ ಮಗನೆಂದು ಪಾಲು ಪಡೆಯುವನು, (೧ನೇ ಕ್ಲಾಜು ನೋಡಿ. ೨ ನೇಯ ಕ್ಲಾಜಿನಿಂದಾಗಿ ಬೇರೆಯಾದ ಮಗನು ತಂದೆಯ ಪಾಲಿನಲ್ಲಿ ಪಾಲು ಕೇಳುವ ಹಕ್ಕು ಕಳೆದುಕೊಳ್ಳುತ್ತಾನೆ. ಈ ಕಲಮಿನ ಉದ್ದೇಶ ಬಹುತರ ಮಿತಾಕ್ಷರ ಏಕತ್ರ ಕುಟುಂಬದಲ್ಲಿ ಪಾಲುಗಾರಿಕೆ ಯಾಗದಂತೆ ಪ್ರೋತ್ಸಾಹಿಸುವದಾಗಿದೆ.

ಮಿತಾಕ್ಷರ ಏಕತ್ರ ಕುಟುಂಬ ಮತ್ತು ಸ್ತ್ರೀ ವಾರಸಾದಾರರ ವಾರಸಾ ಹಕ್ಕುಗಳಲ್ಲಿ ಹೊಂದಾಣಿಕೆಯನ್ನು ಸಾಧಿಸ ಲೆಳೆಸುವ ಈ ಕಲಮು ಸಂಯುಕ್ತ ಸಮಿತಿಯಲ್ಲಿ ಭಿನ್ನಾಭಿಪ್ರಾಯಕ್ಕೆಡೆಯಿತ್ತಿತು. ಭಿನ್ನಾಭಿಪ್ರಾಯವಿತ್ತ ಸದಸ್ಯರಲ್ಲೊಬ್ಬರಾದ ಶ್ರೀ ಶಂಕರ ಶಾಂತಾರಾಮ ಮೋರೆಯವರು ಕೆಳಗಿನಂತೆ ಅಭಿಪ್ರಾಯಪಟ್ಟಿದ್ದಾರೆ:

“ಮಿತಾಕ್ಷರ ಏಕತ್ರ ಕುಟುಂಬವನ್ನು ಕೊನೆಗೊಳಿಸದ ವಿನಾ, ವಾರಸಾ ಪ್ರಶ್ನೆಯ ಪೂರ್ತಿಯಾದ ಸಮಾಲೋಚನೆ ಅಸಾಧ್ಯವೆಂದು ನನ್ನ ಧೃಡವಾದ ಅಭಿ

ಪ್ರಾಯವಿದೆ. ........ ೬ ನೇಯ ಕ್ಲಾಜು ಸ್ತ್ರೀ ವಾರಸದಾರರ ಬಾಧ್ಯತೆ ಹಾಗೂ ಏಕತ್ರ ಕುಟುಂಬದ ಆಸ್ತಿಯ ಅಸ್ತಿತ್ವಗಳ ನಡುವೆ ಹೊಂದಾಣಿಕೆ ಮೂಡುವ ಪ್ರಯತ್ನವಾಗಿದೆ. ಈ ಕ್ಲಾಜು ಸ್ತ್ರೀ ಹಾಗೂ ಪುರುಷ ವಾರಸದಾರರ ನ್ಯಾಯವಾದ ಬೇಡಿಕೆಗಳನ್ನು ಸಮತೆ ಹಾಗೂ ನ್ಯಾಯದೃಷ್ಟಿಯಿಂದ ಸಮಾಧಾನಪಡಿಸುವಬಗ್ಗೆ ನನಗೆ ಸಂದೇಹವಿದೆ."

## ೪೫ ಮಿತಾಕ್ಷರ ಸಮಾಯಕ

ಹಿಂದೂ ಏಕತ್ರ ಕುಟುಂಬವು ಸಾಮಾನ್ಯ ಪಿತೃವಿನ ಪುರುಷ ವಂಶಾನುವಳಿಯಲ್ಲಿ ಬರುವ ಎಲ್ಲರನ್ನು ಒಳಗೊಳ್ಳುತ್ತದೆ. ಅಲ್ಲದೆ ವಂಶಸ್ಥರೆಲ್ಲರ ಅವಿವಾಹಿತ ಪುತ್ರಿಯರು ಮತ್ತು ವಿಧವೆಯರೂ ಏಕತ್ರ ಕುಟುಂಬದ ಸದಸ್ಯರೆನಿಸುತ್ತಾರೆ. ಮಿತಾಕ್ಷರ ಸಮಾಯಕವು ಏಕತ್ರ ಕುಟುಂಬಕ್ಕಿಂತ ಬಹಳ ಸಂಕುಚಿತವಾದುದಾಗಿದ್ದು ಅದರಲ್ಲಿ ಸಮಾಯಕ ಆಸ್ತಿಗೆ ಜನ್ಮದಿಂದಲೇ ಹಕ್ಕು ಪಡೆಯುವ ಪುರುಷ ಕುಟುಂಬಸ್ಥರು ಮಾತ್ರ ಸಮಾವೇಶವಾಗುತ್ತಾರೆ. ಹುಟ್ಟಿನಿಂದಲೇ ಪ್ರಾಪ್ತವಾಗುವ ಈ ವಿಶಿಷ್ಟ ಪ್ರಕಾರದ ಬಾಧ್ಯತೆಗೆ ಅಪ್ರತಿಬಂಧದಾಯವೆಂದು ಹೆಸರಿದ್ದು ಅದು ಶೇಷಾಧಿಕಾರದಿಂದ ಅನುಪ್ರಾಪ್ತ ( Devolve ) ವಾಗುತ್ತದೆ. ಅಪ್ರತಿಬಂಧದಾಯ ಪಡೆಯುವ ಸಮಾಯಕ ಬಾಧ್ಯಸ್ತರು ಮೃತನ ನಂತರ ಮೂರು ತಲೆಮಾರಿನ ಅಖಂಡವಾದ ಗಂಡುವಳಿಯ ಅನುವಂಶಿಕ ( Descendants) ರಾಗಿದ್ದಾರೆ. ಎಂದರೆ ತಂದೆ, ಅವನ ಪುತ್ರರು, ಪೌತ್ರರು ಮತ್ತು ಪ್ರಪೌತ್ರರು ಒಂದೇ ಸಮಾಯಕ (Coparcenary) ದ ಸದಸ್ಯರೆನಿಸುತ್ತಾರೆ, (37 Bom L. R 692, 696 ). ಪ್ರಪೌತ್ರ ಅಥವಾ ಮರಿಮಗನ ಮಗನು ಸಮಾಯಕ ಬಾಧ್ಯಸ್ತನಾಗಲಾರನು. ತಂದೆಯ ಮರಣಾನಂತರ ಉಳಿದ ಏಕತ್ರ ಕುಟುಂಬಸ್ಥ ಸಮಾಯಕದಾರರೊಡನೆ ಈತನು ಸಮಾಯಕ ಬಾಧ್ಯಸ್ಥನಾಗಬಲ್ಲನು. ಯಾಕೆಂದರೆ, ಆಗ ಮರಿ ಮಗನ ಮಗನು ಸಾಮಾನ್ಯ ಪಿತೃವಿ (Ancentor) ನಿಂದ ಮೂರನೆಯ ತಲೆಮಾರಿನ ಒಳಗಿನವನಾಗುವನು.

ಸಮಾಯಕ ಬಾಧ್ಯಸ್ತರ ಆಸ್ತಿಯಲ್ಲಿನ ಪಾಲಿನ ಪರಿಮಾಣವು ನಿರ್ದಿಷ್ಟವಾದುದಲ್ಲ. ಅವಿಭಕ್ತವಾದ ಅವರ ಬಾಧ್ಯತೆಯು ಸಮಾಯಕದ ಸದಸ್ಯತ್ವದಲ್ಲಿ ಹೆಚ್ಚು ಕಡಿಮೆಯಾದಂತೆ ಆಕುಂಚನ-ವಿಸ್ತಾರಗಳನ್ನು ಹೊಂದುತ್ತಿರುತ್ತದೆ. ಸಮಾಯಕ ಬಾಧ್ಯಸ್ತಿಯು ವಾಟಣಿಯಾದ ಕ್ಷಣವೇ ಕೊನೆಯಾಗುತ್ತದೆ.

ಮಗಳು ಸಮಾಯಕ ಬಾಧ್ಯಸ್ಥಳಾಗದಿದ್ದರೂ, ಅವಳಿಗೆ ಏಕತ್ರಕುಟುಂಬದ ಆಸ್ತಿಯಿಂದ ಜೀವಿತಾಂಶ ಪಡೆಯುವ ಮತ್ತು ವಿವಾಹದ ವೆಚ್ಚ ಪಡೆಯುವ ಹಕ್ಕುಂಟು. ಈ ಹಕ್ಕು ಮೊದಲು ಮಗಳಿಗೆ ಸಿಗುತ್ತಿದ್ದ ಪಾಲಿನ ಅವಶೇಷವೆಂದು ತಿಳಿಯಬಾ

ಗಿದೆ, (ಸುಬ್ಬಯ್ಯ ವಿ. ಅನಂತರಾಮಯ್ಯ 53 Mad 85, 98).

## ೪೨ ಮಿತಾಕ್ಷರ ಸಮಾಯಕ ಆಸ್ತಿ

ಮಿತಾಕ್ಷರ ಬಾಧ್ಯಸ್ತಿ ಅಥವಾ ಆಸ್ತಿಯೆಂಬುದು ಮಿತಾಕ್ಷರ ಸಂಪ್ರದಾಯದ ಪಾರಿಭಾಷಿಕ ಪದವಾಗಿದೆ. ಹಿಂದುವೊಬ್ಬನಿಗೆ ಹುಟ್ಟನಿಂದಲೇ ಯಾವ ಆಸ್ತಿಯಲ್ಲಿ ಹಕ್ಕು ಉದ್ಭೂತವಾಗುವುದೋ ಅಂಥ ಆಸ್ತಿಯೆಲ್ಲ ಸಮಾಯಕ ಆಸ್ತಿ ಅಥವಾ ಬಾಧ್ಯಸ್ತಿಯೆನಿಸುತ್ತದೆ ಅದನ್ನು ಅಪ್ರತಿಬಂಧದಾಯವೆಂದೂ ಕರೆಯಲಾಗಿದೆ. ಸಮಾಯಕ ಬಾಧ್ಯಸ್ತನ ಸ್ವಯಾರ್ಜಿತ ಸಂಪತ್ತು ಸಾಮಾನ್ಯವಾಗಿ ಸಮಾಯಕ ಆಸ್ತಿಯೆನಿಸುವದಿಲ್ಲ. ಯಾಕೆಂದರೆ ಅದಕ್ಕೆ ಆಸ್ತಿ ಸಂಪಾದಿಸಿದವನ ಮರಣಪೂರ್ವದಲ್ಲಿ ಬೇರಾರಿಗೂ ಹಕ್ಕುಂಟಾಗಲಾರದು. ಎಂತಲೇ ಅದನ್ನು ಸಪ್ರತಿಬಂಧದಾಯವೆಂದು ಕರೆಯಲಾಗಿದೆ.

ಸಮಾಯಕ ಆಸ್ತಿಯಲ್ಲಿ ಸಮಾವೇಶವಾಗತಕ್ಕ ಆಸ್ತಿಪ್ರಕಾರಗಳು ಕೆಳಗಿನಂತಿವೆ:

(೧) ಹಿಂದೂ ಕಾನೂನಿನ ಪ್ರಕಾರ ಪಿತ್ರಾರ್ಜಿತ ಆಸ್ತಿ (Ancestral-Property) ಯೆಂದು ಪರಿಗಣಿಸಲ್ಪಡುವ ಆಸ್ತಿ. ಒಬ್ಬನಿಗೆ ತನ್ನತಂದೆ, ತಂದೆಯ ತಂದೆ ಅಥವಾ ತಂದೆಯ ತಂದೆಯ ತಂದೆಯಿಂದ ದಾಯವಾಗಿಬಂದ ಆಸ್ತಿಯು ಪಿತ್ರಾರ್ಜಿತ ಆಸ್ತಿಯೆನಿಸುತ್ತದೆ.

(೨) (ಅ) ಸಮಾಯಕಆಸ್ತಿಯ ಸಹಾಯದಿಂದ ಸಂಪಾದಿಸಿದ ಆಸ್ತಿ, (ಅಯ್ಯನಗೌಡ ವಿ. ಗದಿಗೆಪ್ಪ A I R 1940 Bom 200).

(ಬ) ಸಮಾಯಕ ಆಸ್ತಿಯ ಸಹಾಯದಿಂದಲ್ಲದಿದ್ದರೂ, ಏಕತ್ರ ಕುಟುಂಬಸ್ಥರಾಗಿದ್ದು, ಸಮಾಯಕವಾಗಿ ಆಸ್ತಿಯನ್ನು ಉಪಭೋಗಿಸುತ್ತಿರುವ ಇಬ್ಬರು ಅಥವಾ ಹೆಚ್ಚು ಏಕತ್ರ ಕುಟುಂಬಸ್ಥರ ಸಂಯುಕ್ತಯತ್ನ (Joint Effort) ದಿಂದ ಗಳಿಸಲಾದ ಆಸ್ತಿ. ಆದರೆ ಇಂಥ ಆಸ್ತಿಯು ಯಾವುದೇ ವ್ಯತಿರಿಕ್ತ ಸೂಚನೆಯ ಅಭಾವದಲ್ಲಿ ಮಾತ್ರ ಸಮಾಯಕ ಆಸ್ತಿಯೆನಿಸುವದು, (ಬಸಪ್ಪ ವಿ. ಹಳ್ಳೆಪ್ಪ 33 Mys 73).

(೩) ಸಮಾಯಕ ಬಾಧ್ಯಸ್ತನೊಬ್ಬನು ತನ್ನ ಪ್ರತ್ಯೇಕ ಆಸ್ತಿ (Separate Property) ಯನ್ನು ಪ್ರತ್ಯೇಕ ಅಥವಾ ವ್ಯಕ್ತಿಗತ ಹಕ್ಕನ್ನು ತ್ಯಜಿಸಿಬರುವ

ಉದ್ದೇಶದಿಂದ ಏಕತ್ರ ಕುಟುಂಬದ ಸಮಾಯಕ ಆಸ್ತಿಯಲ್ಲಿ ಮರಳಿಕೂಡಿಸಿದರೆ—ಅಂಥ ಆಸ್ತಿ, (1950 Mad 33).

(೪) ಗೆಳಗೆ ಕಾಣಿಸಿದ ಸನ್ನಿವೇಶಗಳಲ್ಲಿ ಏಕತ್ರ ಕುಟುಂಬವು ಕಳೆದುಕೊಂಡಿದ್ದ ಏಕತ್ರಆಸ್ತಿಯು, ಮರಳಿ ದೊರೆತರೆ ಅದು ಸಮಾಯಕ ಆಸ್ತಿಯೆನಿಸುವದು:

(ಅ) ಏಕತ್ರ ಕುಟುಂಬದ ಸಹಾಯದಿಂದಲೇ ಅಂಥ ಆಸ್ತಿ ಮರಳಿ ದೊರೆತಿದ್ದರೆ, ಅದನ್ನು ಪಡೆದವರು ಯಾರಿದ್ದರೂ, ಅದು ಪೂರ್ತಿಯಾಗಿ ಸಮಾಯಕ ಆಸ್ತಿಯಾಗುವದು.

(ಬ) ಏಕತ್ರ ಕುಟುಂಬದ ನೆರವಿಲ್ಲದೆ, ತಂದೆಯವಿನಾ ಬೇರಾವ ಏಕತ್ರ ಕುಟುಂಬಸ್ಥನಾಗಲಿ ಮರಳಿಪಡೆದ ಆಸ್ತಿಯು, ಸ್ಥಾವರ ಆಸ್ತಿಯಾಗಿದ್ದ ಪಕ್ಷದಲ್ಲಿ ಇದರ ಮುಕ್ಕಾಲುಪಾಲು ಸಮಾಯಕ ಆಸ್ತಿಯಾಗುವದು. ಉಳಿದ ಕಾಲುಪಾಲು ಅದನ್ನು ಪಡೆದವನಿಗೆ ಪ್ರತಿಫಲವೆಂದು ಸಲ್ಲುವದು.

## ೪೭. ಪ್ರಸ್ಥಾಪನೆಯ ಭಾರ

ಏಕತ್ರ ಕುಟುಂಬವಾಗಲಿ, ಹಿಂದೂ ಸಮಾಯಕವಾಗಲಿ ಆಸ್ತಿಯನ್ನು ಪಡೆದಿರಲೇಬೇಕಾದ ಅಗತ್ಯವಿಲ್ಲ. ಕಾರಣ, ಏಕತ್ರಕುಟುಂಬವೊಂದಿದ್ದ ಮಾತ್ರಕ್ಕೆ ಯಾವನೊಬ್ಬ ಏಕತ್ರ ಕುಟುಂಬಸ್ಥನ ಹೆಸರಿನಲ್ಲಿದ್ದ ಆಸ್ತಿಯು ಏಕತ್ರ ಅಥವಾ ಸಮಾಯಕ ಆಸ್ತಿಯೆಂದು ಗ್ರಹಿಕೆಯಾಗಲಾರದು. ಯಾವುವೇ ಆಸ್ತಿಯು ಸಮಾಯಕ ಆಸ್ತಿಯೆಂದು ಸಾಧಿಸುವವರೇ ಆಸ್ತಿಯ ಸಮಾಯಕತ್ವವನ್ನು ಪ್ರಸ್ಥಾಪಿಸಬೇಕಾಗುವದು ಆದರೆ ಏಕತ್ರ ಕುಟುಂಬಕ್ಕೆ ಸಮಾಯಕ ಆಸ್ತಿಯಿತ್ತೆಂದೂ, ಅದರ ಮೊತ್ತ ಹಾಗೂ ಸ್ವರೂಪಗಳನ್ನು ಲಕ್ಷಿಸಿದಲ್ಲಿ, ಅದು ದಾವೆಯ ಆಸ್ತಿಯ ಸಂಪಾದನೆಗೆ ತಳಹದಿಯಾಗಿರುವ ಸಂಭವವಿದೆಯೆಂದೂ, ಪ್ರಸ್ಥಾಪಿಸಿದರೆ, ದಾವೆಯ ಆಸ್ತಿ ಸ್ವಯಾರ್ಜಿತವೆಂದು ಸಾಧಿಸುವ ಪಕ್ಷವು, ಅದನ್ನು ಸಮಾಯಕ ಆಸ್ತಿಯ ಸಹಾಯವಿಲ್ಲದೆ ಸಂಪಾದಿಸಲಾಗಿದೆಯೆಂದು ಪ್ರಸ್ಥಾಪಿಸಬೇಕಾಗುತ್ತದೆ, (ಶ್ರೀನಿವಾಸ ಕೃಷ್ಣರಾವ ವಿ. ನಾರಾಯಣ AIR 1954 s c 379). ಆಧುನಿಕ ಕಾಲದ ವ್ಯಕ್ತಿನಿಷ್ಠತೆ ಹಾಗೂ ಇತರ ಸಾಮಾಜಿಕ ಪರಿಸ್ಥಿತಿಗಳನ್ನುನುಲಕ್ಷಿಸಿ, ಸಮಾಯಕ ಬಾಧ್ಯಸ್ಥನ ವಿಮಾಪಾಲಿಸಿ ರಕಮು, ಆತನ ಪ್ರತ್ಯೇಕ ಆಸ್ತಿಯೆಂದು ಗ್ರಹಿಸಬೇಕಾಗುವುದೆಂದು, ವೆಂಕಟಸುಬ್ಬರಾವ್ ವಿ. ಲಕ್ಷ್ಮೀನರಸಮ್ಮ 1954 Mad 26 ಪ್ರಕರಣದಲ್ಲಿ ಮದ್ರಾಸ ಹೈಕೋರ್ಟು ತೀರ್ಮಾನಮಾಡಿದೆ.

## ೪೮ ಸಮಾಯಕ ಆಸ್ತಿಯ ಅನುಪ್ರಾಪ್ತಿವಿಧಾನ

ಮಿತಾಕ್ಷರ ಸಮಾಯಕ ಬಾಧ್ಯಸ್ತಿಕೆಯು ಶೇಷಾಧಿಕಾರ ವಿಧಾನದಿಂದ ಅನು ಪ್ರಾಪ್ತ (Devolue) ವಾಗುವನೆಂಬ ಹಿಂದೂ ಕಾನೂನಿನ ನಿಯಮವನ್ನೇ ೬ನೆಯ ಕಲಮಿನಲ್ಲಿ ಅಡಕ ಗೊಳಿಸಲಾಗಿದೆ. ಈ ವಿಧಾನದಲ್ಲಿ ಸಮಾಯಕ ಆಸ್ತಿಯಲ್ಲಿ ಸಮಾಯಕಸ್ಥನಿಗಿರುವ ಬಾಧ್ಯತೆಯು ಅವನು ಮೃತನಾದ ಕೂಡಲೆ, ಸಮಾಯಕ ಬಾಧ್ಯಸ್ತಿಯಲ್ಲಿಯೇ ವಿಲೀನ ಹೊಂದುತ್ತದೆ; ಶೇಷರಾದ ಅಥವಾ ಉಳಿದ ಸಮಾಯ ಕಸ್ಥರಿಗೆ ಶೇಷಾಧಿಕಾರದಿಂದ ಅನುಪ್ರಾಪ್ತ ವಾಗುತ್ತದೆ; ಶೇಷಾಧಿಕಾರದ ವಿಶಿಷ್ಟ ಲಕ್ಷಣ ವೆಂದರೆ ಸಮಾಯಕಸ್ಥನ ಅವಿಭಕ್ತ ಬಾಧ್ಯತೆಗೆ ಅವನ ವಾರಸದಾರರು ವಾರಸಾ ಹಕ್ಕು ಪಡೆಯುವದಿಲ್ಲ. ಮೇಲ್ಕಾಣಿಸಿದಂತೆ ಅದು ಜೀವಂತ ಸಮಾಯಕಸರಿಗೆಲ್ಲ ಸಾಮೂಹಿಕವಾಗಿ ಸಲ್ಲುತ್ತದೆ.

ಈ ಕಾಯ್ದೆ ಬರುವದಕ್ಕಿಂತ ಮುಂಚೆ ಶೇಷಾಧಿಕಾರಕ್ಕೆ ವ್ಯತ್ಯಯ ತಂದ ಶಾಸನ ವೆಂದರೆ ಹಿಂದೂ ಸ್ತ್ರೀಯರ ಆಸ್ತಿ ಹಕ್ಕಿನ ಕಾಯ್ದೆ ೧೯೩೭. ಆ ಕಾಯ್ದೆ ಪ್ರಸ್ತುತ ಕಾಯ್ದೆಯ ೩೧ನೇ ಕಲಮಿನಲ್ಲಿ ಸುವ್ಯಕ್ತವಾಗಿ ರದ್ದು ಮಾಡಲ್ಪಟ್ಟಿದೆ. ಆದರೆ ಹಿಂದೂ ಸ್ತ್ರೀಗೆ ಪ್ರಸ್ತುತ ಕಲಮಿನ ಪರಿಮಿತಿಯ (Proviso) ಮೂಲಕ ಹೆಚ್ಚಿನ ಅಧಿಕಾರವನ್ನು ಕೊಡಲಾಗಿದೆ. ಈ ಕಾಯ್ದೆಯ ೧೪ನೆಯ ಕಲಮು ಸ್ತ್ರೀಯರ ಪಾಲಿನ ಆಸ್ತಿಯನ್ನು ಸ್ವತಂತ್ರ ಆಸ್ತಿಯೆಂದು ಘೋಷಿಸಿದೆ. ಅಂತೂ ಈ ಕಾಯ್ದೆಯಿಂದ ಸ್ತ್ರೀಯರು ಸಮಾಯಕ ಆಸ್ತಿಯಲ್ಲಿ ಪಾಲು ಪ ಯುವುದಲ್ಲದೆ ಪಡೆದ ಪಾಲನ್ನು ಕೇವಲ ಜೀವಾವಧಿ ಬಾಧ್ಯತೆಯೆಂದು ಮಾತ್ರ ಉಪಭೋಗಿಸದೆ ಸ್ವತಂತ್ರ ಆಸ್ತಿಯೆಂದೇ ವಿಲೇವಾರಿ ಮಾಡ ಬಹುದಾಗಿದೆ.

## ೪೯ ಈ ಕಾಯ್ದೆಯ ನಂತರ ಶೇಷಾಧಿಕಾರ

ಈ ಕಾಯ್ದೆ ಜಾರಿಗೆ ಬಂದನಂತರವೂ ಪುರುಷ ಸಮಾಯಕಸ್ಥರ ಮಟ್ಟಿಗೆ ಸಮಾಯಕ ಆಸ್ತಿಯು ಶೇಷಾಧಿಕಾರ ನಿಯಮಕ್ಕನುಸಾರವೇ ಅನುಪ್ರಾಪ್ತವಾಗುತ್ತದೆ. ಶೇಷಾಧಿಕಾರಕ್ಕೆ ವ್ಯತ್ಯಯ ಬರುವುದು ಎರಡು ಸನ್ನಿವೇಶಗಳಲ್ಲಿ ಮಾತ್ರ: (೧) ಸಮಾಯಕಸ್ಥನು ಪರಿಶಿಷ್ಟದ ೧ ನೆಯ ವರ್ಗದ ಸ್ತ್ರೀವಾರಸದಾರಳನ್ನಾಗಲಿ, ಇಲ್ಲವೆ ಅಂಥವಳ ದ್ವಾರಾ ಹಕ್ಕುಬೇಡುವ ಪುರುಷ ವಾರಸದಾರನನ್ನಾಗಲಿ ಬಿಟ್ಟು ಮೃತ ನಾಗಿದ್ದಾಗ ಮತ್ತು (೨) ಮೃತನಾದ ಸಮಾಯಕಸ್ಥನು ಮರಣ ಪೂರ್ವದಲ್ಲಿ ತನ್ನ ಸಮಾಯಕ ಬಾಧ್ಯತೆಯನ್ನು ಮೃತ್ಯುಲೇಖ ಮುಖಾಂತರ ವ್ಯವಸ್ಥೆ ಮಾಡಿದಾಗ.

ಸಮಾಯಕಸ್ಥನು ಜೀವಂತ ಇರುವಾಗಲೇ ತನ್ನ ಸಮಾಯಕ ಬಾಧ್ಯತೆಯನ್ನು ಕಾನೂನಿನ ಅನುಮತಿ ಇರುವಮಟ್ಟಿಗೆ ಮಾರಾಟ ಮಾಡಿಯೋ,ವತ್ತಿಹಾಕಿಯೋ,ಅಥವಾ ನಾಲಗಾರನಿಂದ ಜಪ್ತಿ ಮಾಡಿಸಿಯೋ,ಶೇಷಾಧಿಕಾರವನ್ನು ವಿಫಲಗೊಳಿಸ ಬಹುದಾಗಿದೆ.

ಇಂಥ ಬಾಧ್ಯತೆಯನ್ನು, ನಾದಾರಿ ಅರ್ಜಿಯ ಮೂಲಕ ಆಫೀಸಿಯಲ್ ಅಸ್ಸಾಯಿನೀ ಅಥವಾ ರಿಸೀವರ ತಾಬೆಗೆ ಒಪ್ಪಿಸುವ ಮೂಲಕವೂ, ಶೇಷಾಧಿಕಾರ ಅನುಪ್ರಾಪ್ತಿಯನ್ನು ವಿಫಲಗೊಳಿಸಬಹುದು, ( ಗೋಕುಲಚಂದ ವಿ। ಹುಕುಮ ಚಂದ ನಥಮಲ್ 48 I A 162).

## ೫೦ ಮಿತಾಕ್ಷರ ಸಮಾಯಕದ ಭವಿತವ್ಯ

ಪರಂಪರಾಗತ ಹಿಂದೂ ಕಾನೂನನ್ನು ಪ್ರಗತಿಪರವಾಗಿ ತಿದ್ದುಪಡಿಮಾಡಲೋಸುಗ ಕಾಲ ಕಾಲಕ್ಕೆ ಜಾರಿಗೆ ಬಂದ ಹಿಂದೂ ಕಾನೂನಿನ ತಿದ್ದುಪಡಿ ಶಾಸನ ( Enactments ) ಗಳಿಂದ ಮಿತಾಕ್ಷರ ಸಮಾಯಕವು ದುರ್ಬಲ ವಾಗುತ್ತ ನಡೆದಿದೆ. ಇ.ಸ.೧೯೩೦ರ ಹಿಂದೂ ವಿದ್ಯಾಸಂಪಾದನಾಕಾಯ್ದೆಯು ಈ ದಿಸೆಯಲ್ಲಿ ಮೊದಲನೇಯ ಪೆಟ್ಟೆನ್ನಬಹುದು. ಏಕತ್ರ ಕುಟುಂಬಸ್ಥನ ವಿದ್ಯಾ ಸಂಪಾದನೆಯು ಅಂದಿನಿಂದ ಆತನ ಪ್ರತ್ಯೇಕ ಆಸ್ತಿ ಯಾಯಿತು. ಆ ನಂತರ ೧೯೩೭ರ ಹಿಂದೂ ಸ್ತ್ರೀಯರ ಆಸ್ತಿ ಹಕ್ಕಿನ ಕಾಯ್ದೆ ಹಿಂದೂ ವಿಧವೆಗೆ ತನ್ನ ಮೃತನಾದ ಸಮಾಯಕ ಪತಿಯ ಪರವಾಗಿ ವಾಟಣಿ ಕೇಳಲು ಹಕ್ಕು ದೊರೆಯಿತು. ಈ ಕಾಯ್ದೆ ಈಗ ರದ್ದಾಗಿದೆ. ಆಮೇಲೆ ೧೯೪೬ರ ಹಿಂದೂ ವಿವಾಹಿತ ಸ್ತ್ರೀಯರ ಪ್ರತ್ಯೇಕ ಆವಾಸ ಮತ್ತು ಜೀವಿತಾಂಶದ ಹಕ್ಕಿನ ಕಾಯ್ದೆಯಿಂದ ಜೀವಿತಾಂಶಕ್ಕೋಸ್ಕರ ಪತಿಯ ಅವಿಭಕ್ತ ಸಮಾಯಕ ಬಾಧ್ಯತೆಯನ್ನು ಮಾರಾಟ ಮಾಡುವದಕ್ಕೂ ಅವಕಾಶ ವುಂಟಾಯಿತು. ೧೯೫೫ರ ಹಿಂದೂ ವಿವಾಹ ಕಾಯ್ದೆಯನ್ವಯ ಜೀವಿತಾಂಶದ ಡಿಕ್ರೀ ಪಡೆದಾಗಲೂ ಇದೇ ಪರಿಣಾಮವುಂಟಾಗ ತ್ತದೆ. ಪ್ರಸ್ತುತ ಹಿಂದೂ ವಾರಸಾ ಕಾಯ್ದೆಯಂತೂ ಮಿತಾಕ್ಷರ ಸಮಾಯಕಕ್ಕೆ ಮರಣಾಂತಿಕ ಪೆಟ್ಟು ಕೊಟ್ಟಿದೆ. ೬ನೆಯ ಕಲಮಿನ ಪರಿಮಿತಿಗನುಸಾರವಾಗಿ ಪರಿಶಿಷ್ಟದ ೧ನೆಯ ವರ್ಗದ ಸ್ತ್ರೀ ವಾರಸದಾರರು ಸಮಾಯಕ ಆಸ್ತಿಯಲ್ಲಿನ ಮೃತನ ಬಾಧ್ಯತೆಗೆ ವಾರಸಾ ಹಕ್ಕು ಪಡೆಯುವ ರಾದ್ದರಿಂದ ವಾಟಣಿ ಅನಿವಾರ್ಯ ವಾಗುತ್ತದೆ. ಎರಡನೆಯದಾಗಿ ಸ್ತ್ರೀವಾರಸದಾರರು ಪಡೆಯುವ ಪಾಲು ಸ್ವತಂತ್ರ ಆಸ್ತಿ ಯೆನಿಸುತ್ತದೆ. ಕೊನೆಯದಾಗಿ ೩೦ ನೆಯ ಕಲಮಿನನ್ವಯ ಸಮಾಯಕಸ್ಥನು ತನ್ನ ಅವಿಭಕ್ತ ಬಾಧ್ಯತೆಯನ್ನು ಮೃತ್ಯುಲೇಖೀಯವಾಗಿ ವಿಲೇವಾರಿ ಮಾಡಬಹುದಾಗಿದೆ.

ವಿಶೇಷ ವಿವಾಹ ಕಾಯ್ದೆಯನ್ವಯ ಹಿಂದುಗಳೂ ತಮ್ಮ ಹಿಂದುತ್ವವನ್ನು ಕಳೆದುಕೊಳ್ಳದೆ ವಿವಾಹವಾಗಬಹುದಾಗಿದೆ. ಹಿಂದೂ ಸಮಾಯಕಸನೊಬ್ಬ, ಈ ಕಾಯ್ದೆಯನ್ವಯ ವಿವಾಹವಾದರೆ, ಆತನು ತಂತಾನೆ ಸಮಾಯಕ ಕುಟುಂಬದಿಂದ ಬೇರ್ಪಡುತ್ತಾನೆ; ಅರ್ಥಾತ್ ಸಮಾಯಕ ವಿಭಗ್ನವಾಗುತ್ತದೆ.

ಅಲ್ಲದೆ, ಇತ್ತೀಚಿನ ಆಸ್ತಿಕರಕಾಯ್ದೆ, ಆದಾಯಕರಕಾಯ್ದೆ, ಪರಮಾವಧಿ ಹಿಡುವಳಿಗೆ ಸಂಬಂಧಿಸಿದ ಶಾಸನಗಳು-ಇವೆಲ್ಲ ಹಿಂದೂ ಏಕತ್ರ ಕುಟುಂಬ ಹಾಗೂ ಸಮಾಯಕ ಆಸ್ತಿಗಳು ಛಿದ್ರ ವಿಚ್ಛಿದ್ರವಾಗುವುದಕ್ಕೆ ಪ್ರಚಂಡವಾದ ಪ್ರೋತ್ಸಾಹ ನೀಯುತ್ತವೆ.

## ೫೧ ಕಲಮಿನ ಪರಿಮಿತಿ

೬ ನೆಯ ಕಲಮಿಗೆ ಜೋಡಿಸಲಾದ ಪರಿಮಿತಿಯು ಅತ್ಯಂತ ಮಹತ್ವದ್ದಾಗಿದೆ. ಈ ಪರಿಮಿತಿಯಿಂದ ಪ್ರಪ್ರಥಮವಾಗಿ ಪರಿಶಿಷ್ಟದ ೧ ನೆಯ ವರ್ಗದ ಸ್ತ್ರೀ ವಾರಸದಾರರಿಗೆ ವಾರಸಾಹಕ್ಕು ಪ್ರಾಪ್ತವಾಗುತ್ತದೆ. ಈ ಹಕ್ಕಿನಿಂದಾಗಿ ಅವರೂ, ಅವರಮೂಲಕ ಹಕ್ಕುಕೇಳುವ ಅದೇವರ್ಗದಲ್ಲಿನ ಪುರುಷ ವಾರಸದಾರರೂ, ಮಿತಾಕ್ಷರ ಸಮಾಯಕದಲ್ಲಿನ ಮೃತನ ಬಾಧ್ಯತೆಯಲ್ಲಿ ಪಾಲು ಪಡೆಯುತ್ತಾರೆ. ಈ ಪರಿಮಿತಿಯು, ಪರಿಶಿಷ್ಟದ ೧ ನೆಯವರ್ಗದ ಸ್ತ್ರೀ ವಾರಸದಾರರು, ಮತ್ತು ಸ್ತ್ರೀ ವಾರಸಾದಾರರ ದ್ವಾರಾ ಹಕ್ಕು ಕೇಳುವ ಅದೇ ಪರಿಶಿಷ್ಟದ ವರ್ಗದಲ್ಲಿನ ಪುರುಷ ವಾರಸದಾರರು-ಇವರಿಗೆ ಮಾತ್ರ ಅನ್ವಯಿಸುವದೆಂಬುದನ್ನು ಗಮನಿಸಬೇಕು.

ಮರಣ ಕಾಲದಲ್ಲಿ ಮೃತನು ವಾಟಣಿಯಾಗಿರಲಿಲ್ಲವೆಂಬ ಮತ್ತು ಆತನು ಯಾವುದೇ ಮೃತ್ಯುಲೇಖದಿಂದ ತನ್ನ ಸಮಾಯಕ ಬಾಧ್ಯಸ್ಥಿಯನ್ನು ವಿಲೇವಾರಿ ಮಾಡಿರಲಿಲ್ಲವೆಂಬ ಗ್ರಹಿಕೆ ಈ ಪರಿಮಿತಿಯ ತಳಹದಿಯಾಗಿದೆ. ಮೇಲ್ಕಾಣಿಸಿದ ಸ್ತ್ರೀ ಅಥವಾ ಪುರುಷ ವಾರಸದಾರರು ವಾರಸಾ ರಿತ್ಯಾ ಪಾಲುಕೊಳ್ಳಬಹುದಾದ ಮೃತ ಸಮಾಯಕಸ್ಥನ ಸಮಾಯಕ ಆಸ್ತಿಯಲ್ಲಿನ ಬಾಧ್ಯತೆಯ ಪರಿಮಾಣವನ್ನು ನಿರ್ಧರಿಸುವಾಗಲೂ, ಆತನು ತನ್ನ ಮರಣ ಪೂರ್ವದಲ್ಲಿ ವಾಟಣಿ ಬೇಡಿ ಸಮಾಯಕ ಆಸ್ತಿಯಿಂದ ತನ್ನಪಾಲನ್ನು ಬೇರ್ಪಡಿಸಿಕೊಂಡನೆಂಬ ಗ್ರಹಿಕೆಯನ್ನು ಮಾಡಲಾಗಿದೆ. ಈ ಪರಮಿತಿಯನ್ವಯ ನಿರ್ದಿಷ್ಟವಾದ ಮೃತ ಸಮಾಯಕಸ್ಥನ ಪಾಲಿನ ಬಾಧ್ಯತೆಯು ಶೇಷಾಧಿಕಾರದಿಂದ ಅನುಪ್ರಾಪ್ತವಾಗದೆ, ಈ ಕಾಯ್ದೆಗನುಸಾರವಾದ ವಾರಸಾಕ್ರಮಕ್ಕನುಸರಿಸಿ ಅನುಪ್ರಾಪ್ತವಾಗುತ್ತದೆ. ಈ ಏರ್ಪಾಡು ಪ್ರಸ್ತುತ ಕಾಯ್ದೆ ಜಾರಿಗೆ ಬಂದ ನಂತರ ಮೃತನಾದ ಸಮಾಯಕಸ್ಥನ ಬಾಧ್ಯತೆಗೆ ಮಾತ್ರ ಅನ್ವಯಿಸುತ್ತದೆ.

ಈ ನಿರ್ಬಂಧವನ್ನು ಅರ್ಥೀಕರಿಸುವಾಗ ನ್ಯಾಯಾಲಯಗಳು ಈ ಕಾಯ್ದೆಯ ಉದ್ದೇಶ ಹಾಗೂ ಅದನ್ನು ಜಾರಿಗೆ ತರಲು ಕಾರಣವಾದ ಸಾಮಾಜಿಕ ಪರಿಸ್ಥಿತಿಗಳನ್ನು ಅನುಲಕ್ಷಿಸಬೇಕಾಗುವದು ನ್ಯಾಯ ಸಮ್ಮತವಾಗಿದೆ. (ಬಾಪೂಭಾಯ್ ವಿ|| ಮುಂಬಯಿ ರಾಜ್ಯ A I R 1955 Bom 1)

ಮೃತನ ಸಮಾಯಕ ಬಾಧ್ಯತೆಗೆ ಈ ಪರಿಮಿತಿಗನುಸಾರವಾಗಿ ವಾರಸಾಪಡೆಯುವ ಆತನ ಸಂಬಂಧಿಕರೆಂದರೆ : (ಅ) ಪರಿಶಿಷ್ಟದ ೧ ನೆಯ ವರ್ಗದ ಸ್ತ್ರೀ ವಾರಸದಾರರು ಎಂದರೆ: ೧) ಮಗಳು (೨ ಮಗನ ಮಗಳು (೩) ಮೊಮ್ಮಗನ ಮಗಳು (೪) ಮಗಳ ಮಗಳು ೫) ವಿಧವೆ (೬) ಮಗನ ವಿಧವೆ (೭) ಮೊಮ್ಮಗನ ವಿಧವೆ, ಮತ್ತು (೮) ತಾಯಿ; (ಬ) ಈ ಸ್ತ್ರೀ ವಾರಸದಾರರಿಂದ ಹಕ್ಕು ಕೇಳುವ ಪರಿಶಿಷ್ಟದ ೧ ನೆಯ ವರ್ಗದಲ್ಲಿನ ಪುರುಷರು-ಎಂದರೆ: (೧) ಮೃತಳಾದ ಮಗಳ ಮಗ; ಕೊನೆಯದಾಗಿ (ಕ) ೧ನೆಯ ವರ್ಗದ ಇತರ ಪುರುಷರು-ಎಂದರೆ: (೧) ಮಗ (೨) ಮೊಮ್ಮಗ (೩) ಮರಿಮಗ. ಈ ಪರಿಮಿತಿಗನುಸಾರವಾಗಿ ಪಡೆಯುವಹಕ್ಕನ್ನು ಮಗ, ಮೊಮ್ಮಗ ಮತ್ತು ಮರಿಮಗ-ಇವರು ಶೇಷಾಧಿಕಾರದಿಂದ ಪಡೆಯದೆ ವಾರಸಾಕ್ರಮಕ್ಕನುಸಾರವಾಗಿ ಪಡೆಯುತ್ತಾರೆ

ಮೃತ ಸಮಾಯಕದಾರನ ಸಮಾಯಕ ಬಾಧ್ಯತೆಯೆಂದರೇನೆಂಬುದನ್ನೂ, ಅದು ಯಾವರೀತಿ ವಾರಸಾಸಲ್ಲುವದೆಂಬುದನ್ನೂ ಕೆಳಗಿನ ದೃಷ್ಟಾಂತವು ವಿಶದಪಡಿಸಬಹುದು'

ತಂದೆಯಾದ ಅ, ಇಬ್ಬರು ಗಂಡಸುಮಕ್ಕಳು ಬ ಹಾಗೂ ಕ, ಮತ್ತು ಮೊದಲೇಸತ್ತ ವ ಗನೊಬ್ಬನಮಗ ಡ,-ಇವರನ್ನೊಳಗೊಂಡ ಮಿತಾಕ್ಷರ ಸಮಾಯಕವಿದೆ. ಸಮಾಯಕ ಆಸ್ತಿಯಬೆಲೆ ೪೦,೦೦೦ ರೂಪಾಯಿಯಿದೆ. ಏಕತ್ರ ಇರುವಾಗಲೇ, ಈ ಕಾಯ್ದೆ ಜಾರಿಗೆ ಬಂದನಂತರ, ಬ,ಕ,ಡ ಇವರನ್ನು ಬಿಟ್ಟು ಅ ಸಾಯುತ್ತಾನೆ. ಅವನ ಹಿಂದೆ ಆತನವಿಧವೆ ವ ಮಗಳು ಮ ಕೂಡ ಇದ್ದಾರೆ. 'ಅ' ಮೃತ್ಯುಲೇಖ ಮಾಡಿಲ್ಲ. ಇಲ್ಲಿ ೧ ನೆಯ ವರ್ಗದ ಸ್ತ್ರೀ ವಾರಸದಾರರಿರುವದರಿಂದ ೬ ನೆಯ ಕಲಮಿನ ಪರಿಮಿತಿ ಅನ್ವಯಿಸುತ್ತದೆ. ಕಲಮಿನ ೧ ನೆಯ ವಿವರಣೆಯನ್ವಯ ಮೃತನ ಸಮಾಯಕ ಬಾಧ್ಯತೆಯು ಒಟ್ಟು ಸಮಾಯಕ ಆಸ್ತಿಯ ಕಾಲು ಪಾಲಿನಷ್ಟಾಗುತ್ತದೆ. ಅರ್ಥಾತ್ ಆತನ ಪಾಲಿಗೆ ೧೦,೦೦೦ ರೂಪಾಯಿ ಬರುತ್ತದೆ. ಇನ್ನುಳಿದ ೩೦,೦೦೦ ರೂಪಾಯಿ ಬೆಲೆಯ ಆಸ್ತಿ ಸಮಾಯಕ ಆಸ್ತಿಯಾಗಿ ಉಳಿಯುತ್ತದೆ. ಅದನ್ನು ಬ,ಕ, ಮತ್ತು ಡ ಸಮಾಯಕದಲ್ಲಿ ಉಪಭೋಗಿಸುತ್ತಾರೆ.

ಈಗ ಅ ನ ಪಾಲಿಗೆ ಬರಬಹುದಾಗಿದ್ದ ೧೦,೦೦೦ ರೂಪಾಯಿ ಆಸ್ತಿಯು ಈ ಕಾಯ್ದೆಯ ವಾರಸಾ ಕ್ರಮುಕ್ಕನುಸಾರ ೧ನೆಯ ವರ್ಗದ ವಾರಸದಾರರಾದ ಬ, ಕ, ಡ, ವ, ಮತ್ತು ಮ, ಇವರಿಗೆ ಸಮನಾಗಿ ಸಲ್ಲಬೇಕು. ಕಾರಣ ಪ್ರತಿಯೊಬ್ಬರಿಗೆ ೨೦೦೦ ರೂಪಾಯಿ ಬೆಲೆ ಬಾಳುವ ಆಸ್ತಿ ಸಿಕ್ಕುತ್ತದೆ

ಇಲ್ಲಿ ಪುತ್ರರಾದ ಬ ಮತ್ತು ಕ ಹಾಗೂ ಪೌತ್ರನಾದ ಡ ಇವರು ಶೇಷಾಧಿಕಾರದಿಂದ ೩೦,೦೦೦ ರೂಪಾಯಿಯ ಆಸ್ತಿಯನ್ನು ಪಡೆದು ಸಮಾಯಕದಲ್ಲಿ ಉಪಭೋಗಿಸುತ್ತಾರೆ. ಅಲ್ಲದೆ ಮೃತನ ಸಮಾಯಕ ಬಾಧ್ಯತೆಯಿಂದ ತಲಾ ೨೦೦೦ ರೂಪಾಯಿ ಆಸ್ತಿಯನ್ನು ಪಡೆಯುತ್ತಾರೆ. ವಾರಸಾ ರೀತ್ಯಾ ಪಡೆದ ೨೦೦೦ರೂಪಾಯಿ ಆಸ್ತಿಯು ಅವರ ಪ್ರತ್ಯೇಕ ಆಸ್ತಿಯೆನಿಸುತ್ತದೆ. ಅದನ್ನು ಸಮಾಯಕ ಆಸ್ತಿಗೆ ಸೇರಿಸುವುದಾಗಲಿ ಅಥವಾ ಪ್ರತ್ಯೇಕವಾಗಿಯೇ ಇಡುವುದಾಗಲಿ ಅವರ ಇಚ್ಛೆಯ ವಿಷಯವಾಗಿದೆ.

ಸಮಾಯಕ ಬಾಧ್ಯಸ್ಥಿಯು, ತಂದೆ–ಮಕ್ಕಳು ಹಾಗೂ ಮೊಮ್ಮಕ್ಕಳಲ್ಲಿ ವಿಭಕ್ತವಾದಾಗ ತಾಯಿ ಅಥವಾ ಆಯಿಗೂ ಒಂದುಪಾಲು ದೊರೆಯಬೇಕೆಂದು ಡಿ. ಎಫ್. ಮುಲ್ಲಾಕೃತ ಹಿಂದೂ ಕಾನೂನಿನ ೩೧೬ ಹಾಗೂ ೩೧೭ ನೆಯ ಕಲಮಿನಲ್ಲಿ ಹೇಳಲಾಗಿದೆ. ಹಾಗಾದ ಪಕ್ಷದಲ್ಲಿ ಮೇಲಿನ ಉದಾಹರಣೆಯಲ್ಲಿ 'ಅ'ನ ಪಾಲಿನ ಸಮಾಯಕ ಆಸ್ತಿಯಬೆಲೆ ೮೦೦೦ ರೂಪಾಯಿಮಾತ್ರ ಆಗುವುದೆಂಬುದನ್ನು ಗಮನಿಸಬೇಕು. ಫಲವಾಗಿ ಪರಿಮಿತಿಗನ್ವಯ ಪಾಲುಪಡೆಯುವ ಸ್ತ್ರೀ ವಾರಸದಾರರ ಪಾಲದ ಮೊತ್ತವು ಇನ್ನೂ ಚಿಕ್ಕದಾಗುವುದು.

## ೫೨ ಅಬಾಧಿತ ಸಮಾಯಕ

ಹೀಗೆ ೬ ನೆಯ ಕಲಮಿನ ಪರಿಮಿತಿಗನುಸಾರವಾಗಿ ವಾರಸಾ ಮುಟ್ಟಿದ ಮೇ-ಲೆಯೂ ಮೂಲ ಸಮಾಯಕ ಅಬಾಧಿತವಾಗಿಯೇ ಉಳಿಯುತ್ತದೆ. ಸಮಾಯಕಸ್ಥನೊಬ್ಬ ಬೇರ್ಪಡುವ ಇಚ್ಛೆಯನ್ನು ವ್ಯಕ್ತಪಡಿಸಿದಾಗ ಮಾತ್ರ ಸಮಾಯಕ ವಿಭಕ್ತವಾಗುತ್ತದೆ. ಈಗ ಮೃತನಾದ ಸಮಾಯಕದಾರನ ಸಮಾಯಕ ಬಾಧ್ಯತೆಯನ್ನು ನಿರ್ಧರಿಸುವಾಗ, ವಿಭಜನೆಯನ್ನು ಕಲ್ಪಿಸಿದ್ದೇವೆ ಮಾತ್ರ. ಈ ಕಾಲ್ಪನಿಕ ವಿಭಜನೆಯಲ್ಲಿ ಮೃತ ಸಮಾಯಕದಾರನ ಇಚ್ಛೆಯ ಪ್ರಶ್ನೆಯೇ ಇಲ್ಲ. ಕಾರಣ ಕಾಲ್ಪನಿಕ ಲೆಕ್ಕಾಚಾರದಿಂದ ಮೃತನ ಸಮಾಯಕ ಬಾಧ್ಯತೆಯನ್ನು ಬೇರ್ಪಡಿಸಿದ ನಂತರವೂ, ಉಳಿದ ಸಮಾಯಕಸ್ಥರು ಮಿಕ್ಕ ಆಸ್ತಿಯನ್ನು ಸಮಾಯಕ ಆಸ್ತಿಯೆಂದೇ ಧಾರಣ ಮಾಡುತ್ತಾರೆ.

## ೫೩ ಸಮಾಯಕಸ್ಥರಲ್ಲಿ ವಾಟಣಿ

ಡಿ.ಎಫ್. ಮುಲ್ಲಾಕೃತ 'ಹಿಂದೂ ಕಾನೂನು' ಗ್ರಂಥದಲ್ಲಿ ಸಮಾಯಕಸ್ಥರ ಪಾಲುಗಾರಿಯ ಬಗ್ಗೆ ಕೆಳಗಿನ ನಿಯಮುಗಳನ್ನು ನಿರೂಪಿಸಲಾಗಿದೆ:-

(೧) ತಂದೆ ಹಾಗೂ ಪುತ್ರರ ನಡುವೆ ವಿಭಜನೆ ನಡೆದರೆ, ಪ್ರತಿಯೊಬ್ಬ ಪುತ್ರನು ತಂದೆಗೆ ಸಮನಾದ ಪಾಲು ಪಡೆಯುತ್ತಾನೆ. ಕಾರಣ ಒಂದು ಏಕತ್ರ ಕುಟುಂಬದಲ್ಲಿ ಒಬ್ಬತಂದೆ, ಮೂವರು ಪುತ್ರರು ಇದ್ದರೆ, ಆಸ್ತಿಯನ್ನು ನಾಲ್ಕು ಸಮಪಾಲುಗಳಲ್ಲಿ ವಿಬಜಿಸಿ, ಪ್ರತಿಯೊಬ್ಬರಿಗೂ ಒಂದು ಪಾಲು ಸಲ್ಲಿಸಲಾಗುತ್ತದೆ.

(೨) ಸೋದರರುಮಾತ್ರ ಏಕತ್ರ ಕುಟುಂಬಸ್ಥರಾಗಿರುವಾಗ, ವಾಟಣಿಯಲ್ಲಿ ಪ್ರತಿಯೊಬ್ಬ ಸೋದರನಿಗೆ ಸಮನಾದ ಪಾಲು ಸಿಗುತ್ತದೆ.

(೩) ಏಕತ್ರ ಕುಟುಂಬದ ವಿವಿಧ ಶಾಖೆಗಳು, ಬೊಡ್ಡೆಗೊಂದರಂತೆ Per stirpes ) ಪಾಲು ಪಡೆಯುತ್ತವೆ. ಬೊಡ್ಡೆಯಲ್ಲಿನ ಸದಸ್ಯರು ತಮ್ಮಲ್ಲಿ ತಲೆಗೊಂದರಂತೆ Percapita ) ಪಾಲು ಪಡೆಯುತ್ತಾರೆ. ಗಂಡು ಮಕ್ಕಳು ಬೇರೆ ಬೇರೆ ಪತ್ನಿಯರ ಮಕ್ಕಳಾಗಿದ್ದರೂ, ಇದೇ ನಿಯಮು ಅನ್ವಯಿಸುತ್ತದೆ.

(೪) ಗಂಡು ಮಕ್ಕಳನ್ನು ಬಿಟ್ಟು ಮೃತನಾಗಿರುವ ಸಮಾಯಕಸ್ಥನ ಸಮಾಯಕಆಸ್ತಿಯಲ್ಲಿನ ಪಾಲನ್ನು, ವಿಭಜನೆಯು ಕಾಲಕ್ಕೆ ಆತನ ಗಂಡು ಮಕ್ಕಳು ತಂದೆಯ ಪ್ರದಿನಿಧಿಗಳಾಗಿ ಸ್ವೀಕರಿಸುತ್ತಾರೆ. ಆದರೆ ಇಂಥ ಮಕ್ಕಳು ಸಮಾಯಕದ ಸದಸ್ಯತ್ವ ಪಡೆಯಲು ಅರ್ಹರಾಗಿರಬೇಕು. ಎಂದರೆ, ಸಾಮಾನ್ಯ ಪೂರ್ವಜನಿಂದ ಮೂರು ತಲೆಮಾರಿನ ಒಳಗಿನವರಾಗಿರಬೇಕು.

### ಉದಾಹರಣೆಗಳು

(೧) ಸಮಾಯಕಸ್ಥರು-ಅ, ಆತನ ಇಬ್ಬರು ಮಕ್ಕಳಾದ ಬ ಮತ್ತು ಕ ಹಾಗೂ ಮಗಳಾದ ಡ ಇರುತ್ತಾರೆ. ಇವರಲ್ಲಿ ಅ ನ ಸಮಾಯಕ ಆಸ್ತಿಯಲ್ಲಿನ ಬಾಧ್ಯತೆ ೧/೩ ಮಾತ್ರ. ಬ ಮತ್ತು ಕ ತಲಾ ೧/೩ ಪಡೆಯುತ್ತಾರೆ. ಡ ಳಿಗೆ ಏನೂ ಸಿಗುವದಿಲ್ಲ.

(೨) ಆ ಹಾಗೂ ಝ ಮೃತನ ಪುತ್ರರಾಗಿದ್ದು, ಅ ಮತ್ತು ಆತನ ಇಬ್ಬರು ಮಕ್ಕಳು ಬ ಹಾಗೂ ಕ-ಈ ಮೂವರುದೊಂದು ಶಾಖೆಯಿದೆ. ಝ ಹಾಗೂ ಆತನ ಮಗ ಯ ಕೂಡಿ ಇನ್ನೊಂದು ಶಾಖೆ ಯಾಗಿದ್ದಾರೆ. ವಿಭಜನೆಯಲ್ಲಿ ಅ ನ ಶಾಖೆಗೆ ಸಮಾಯಕ ಆಸ್ತಿಯ ಅರ್ಧಪಾಲೂ ಝ ನ

ಶಾಖೆಗೆ ಇನ್ನರ್ಧಪಾಲೂ ದೊರೆಯುತ್ತದೆ ಆ ನ ಬೊಡ್ಡೆಯು ಅ ಬ ಮತ್ತು ಕ ಇವರು ಅರ್ಧ ಪಾಲಿನಲ್ಲಿ ತಲಾ ಒಂದೊಂದರಂತೆ ಮೂರುಪಾಲು ಮಾಡಿಕೊಳ್ಳುತ್ತಾರೆ. ಅರ್ಥಾತ್ ಪ್ರತಿಯೊಬ್ಬರು ಆಸ್ತಿಯ ⅙ ಪಡೆಯುತ್ತಾರೆ. ಘ ಮತ್ತು ಯ ತಮಗೆ ಬಂದ ಅರ್ಧ ಪಾಲಿನಲ್ಲಿ ಸಮಪಾಲು ಮಾಡಿಕೊಂಡು ತಲಾ ¼ ಪಾಲು ಪಡೆಯುತ್ತಾರೆ.

## ೫೪ ತಾಯಿಯ ಪಾಲು

ಮಕ್ಕಳಾಗಲಿ ಮೊಮ್ಮಕ್ಕಳಾಗಲಿ ಸಮಾಯಕಸ್ಥರಾಗಿರುವಾಗ ಸಮಾಯಕ ಆಸ್ತಿಯ ವಾಟಣಿಯಲ್ಲಿ ತಾಯಿ ಅಥವಾ ಆಯಿಗೆ ಒಂದೂ ಪಾಲು ಸಿಗುತ್ತದೆ. (ಮುಲ್ಲಾ ಕೃತ ಹಿಂದೂ ಕಾನೂನ ೩೧೬ ಮತ್ತು ೩೧೭ ನೆ ಕಲಮು ಕಳನ್ನು ನೋಡಿ. ತಾಯಿಯ ಪಾಲು ಮಗನ ಪಾಲಿಗೆ ಸಮನಾಗಿರುತ್ತವೆ. ನಾಲ್ಕು ಜನ ಸಮಾಯಕ ಪುತ್ರರಲ್ಲಿ ಒಬ್ಬನೇ ಪುತ್ರ ಬೇರೆಯಾಗಿ ಉಳಿದವರು ಸಮಾಯಕವಾಗಿಯೇ ಉಳಿದಾಗಲೂ ತಾಯಿಗೆ ಪಾಲು ದೊರೆಯ ಬೇಕಾಗುತ್ತದೆ, ( ದಾಮೋದರದಾಸ ವಿ|| ಉತ್ತಮ ರಾಮ 17 Bom 271 236 ). ಕಾರಣ ಬೇರೆಯಾಗುವ ಸಮಾಯಕಸ್ಥನ ಪಾಲಿನ ಪರಿಮಾಣವೇನೆಂಬ ತಿಳಿದುಕೊಳ್ಳಲು ತಾಯಿಯ ಪಾಲವನ್ನು ಲೆಕ್ಕದಲ್ಲಿ ಹಿಡಿಯ ಬೇಕಾಗುತ್ತದೆ, (ತೋಟಪ್ಪಾ ವಿ|| ಶರಣಬಸಪ್ಪಾ A I R 1943 Bom 172 . ಪ್ರಸ್ತುತ ಕಾಯ್ದೆಯ ೬ನೆ ಕಲಮಿನ ಪರಿಮಿತಿಗನುಸಾರವಾಗಿ ಮೃತನಾದ ಸಮಾಯಕ ಪುತ್ರ ನೊಬ್ಬನ ಸಮಾಯಕ ಬಾಧ್ಯತೆಯ ಮೊತ್ತವನ್ನು ನಿಶ್ಚಯ ಪಡಿಸುವದಕ್ಕೋಸ್ಕರ ತಾಯಿಯ ಪಾಲವನ್ನೂ ಲೆಕ್ಕಕ್ಕೆ ಹಿಡಿಯುವದು ಮೇಲಿನ ನಿಯಮಕ್ಕನುಸಾರ ಅಗತ್ಯ ವೆನಿಸುತ್ತದೆ. ಹೀಗೆ ತಾಯಿಯ ಪಾಲವನ್ನು ಲೆಕ್ಕಕ್ಕೆ ಹಿಡಿದುದಾದರೆ ಮೃತ ಸಮಾಯಕಸ್ಥನ ಸಮಾಯಕ ಬಾಧ್ಯತೆಯ ಪರಿಮಾಣ ಇನ್ನಷ್ಟು ಸಂಕುಚಿತವಾಗಿ ಸ್ತ್ರೀ ವಾರಸದಾರಳ ಪಾಲು ಇನ್ನೂ ಚಿಕ್ಕದಾಗುತ್ತದೆ.

೬ ನೆಯ ಕಲಮಿನ ಪರಿಮಿತಿಯನ್ವಯ ಮೃತ ಸಮಾಯಕಸ್ಥನ ಸಮಾಯಕ ಆಸ್ತಿಯಲ್ಲಿನ ಬಾಧ್ಯತೆಯನ್ನು ನಿರ್ಧರಿಸುವಾಗ, ಅವನು ಪುತ್ರನಾಗಿದ್ದ ಪಕ್ಷದಲ್ಲಿ ಆತನ ತಾಯಿಯ ಪಾಲನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಕೂಡದೆಂದು ಶಾಸನ ಕರ್ತರ ಉದ್ದಿಷ್ಟವಿರಲಿಕ್ಕಿಲ್ಲ. ಯಾಕಂದರೆ, ಹಾಗೆ ಅವರ ಉದ್ದಿಷ್ಟವಿದ್ದಿದ್ದರೆ, ೨ ನೆಯ ವಿವರಣೆಯಲ್ಲಿ ವಿಭಕ್ತ ಪುತ್ರರನ್ನು ವಿನಾಯಿಸಿರುವಂತೆ, ತಾಯಿಯನ್ನೂ ಅವರು ಸುವ್ಯಕ್ತವಾಗಿ ವಿನಾಯಿಸುತ್ತಿದ್ದರು.

## ೫೫ "ಪಾಲುಬೇಡುವ ಹಕ್ಕಿರಲಿ ಇಲ್ಲದಿರಲಿ"

ವಿವರಣೆ (೧) ರಲ್ಲಿ "ಅವನಿಗೆ ಪಾಲುಬೇಡುವ ಹಕ್ಕಿರಲಿ ಇಲ್ಲದಿರಲಿ" ಎಂಬ ಮಾತು ಬಂದಿದೆ. ಮಿತಾಕ್ಷರ ಕಾನೂನಿನಲ್ಲಿ ಕೆಲವು ಸಲ ಏಕತ್ರನಾದ ಮಗನಿಗೆ ಸಮಾಯಕ ಆಸ್ತಿಯಲ್ಲಿ ಪಾಟಣಿಮೂಲಕ ಪಾಲುಕೇಳಲು ಹಕ್ಕಿರುವದಿಲ್ಲ; ಅಂಥ ಸಂದರ್ಭಗಳನ್ನು ಪರಿಮಿತಿಯ ಅವಕಾಶದಲ್ಲಿ ತರುವುದೇ ಈ ಮಾತಿನ ಉದ್ದೇಶ ವಾಗಿದೆ.

ಮಿತಾಕ್ಷರ ಕಾನೂನಿನಲ್ಲಿ ಸಾಮಾನ್ಯವಾಗಿ ಪ್ರತಿಯೊಬ್ಬ ವಯಸ್ಕ ಸಮಾಯಕಸ್ಥನಿಗೂ ಸಮಾಯಕದ ವಿಭಜನೆಯನ್ನು ಕೇಳುವ ಹಕ್ಕಿದೆ. ಆದರೆ ಈ ನಿಯಮಕ್ಕೆ ಮೂರು ಅಪವಾದಗಳಿವೆ

(೧) ಸಮಾಯಕಸ್ಥನು 'ಅಜ್ಞಾನ' (Minor) ನಾಗಿರುವಾಗ, ಅವನ ಪರವಾಗಿ ತಂದ ಪಾಟಣಿ ದಾವೆಯಲ್ಲಿ ಡಿಕ್ರಿಸಿಗುವವರೆಗೂ ಪಾಟಣಿ ಸಾಧ್ಯವಿಲ್ಲ. (ಮುಲ್ಲಾಕೃತ ಹಿಂದೂ ಕಾನೂನಿನ ಕಲಮು ೩೦೮ ನೋಡಿ)

(೨) ತಂದೆಯು ತನ್ನ ಸ್ವಂತ ತಂದೆಯೊಡನೆ ಅಥವಾ ಅಣ್ಣತಮ್ಮಂದಿರೊಡನೆ ಏಕತ್ರನಾಗಿರುವಾಗ, ಮುಂಬಯಿಯಲ್ಲಿ ಮಗನಿಗೆ, ತಂದೆಯ ಒಪ್ಪಿಗೆಯಿಲ್ಲದೆ ಸಮಾಯಕದ ವಿಭಜನೆಯನ್ನು ಕೇಳುವ ಹಕ್ಕಿಲ್ಲ, (ಭೂಪಾಲ ವಿ. ತವನಪ್ಪ 46 Bom 425).

(೩) ಪರಂಪರಾಗತ ರೂಢಿಯೊಂದರ ಫಲವಾಗಿ ಪಂಜಾಬದಲ್ಲಿ ತಂದೆ ಜೀವಂತ ಇರುವಾಗ ಪುತ್ರನು ವಿಭಜನೆ ಕೇಳಲುಬಾರದು. ಆದರೆ ತಂದೆಯು ಸಮ್ಮತಿಯಿದ್ದರೆ, ತನ್ನ ಕಕ್ಕಂದಿರೇ ಮೊದಲಾದ ಇತರ ಸಮಾಯಕಸ್ಥರಿಂದ ಪಾಲು ಕೇಳಬಹುದು, (ಸತೀಶನರೇನ್ ವಿ. ದೇವಕಿನಂದನ (AIR 1047 Lah 379F.B).

ಮೇಲ್ಕಾಣಿಸಿದ ಅಜ್ಞಾನ ಸಮಾಯಕಸ್ಥನಿಗಾಗಲಿ, ಪುತ್ರನಿಗಾಗಲಿ, ಸಮಾಯಕದಲ್ಲಿ ಪಾಲುಕೇಳುವಹಕ್ಕು ವಿಶಿಷ್ಟ ಸನ್ನಿವೇಶದಲ್ಲಿ ಇರದಿದ್ದರೂ, ವಿವರಣೆ (೧) ರನ್ವಯ ಕಾಲ್ಪನಿಕ ವಿಭಜನೆಯ ಮೂಲಕ ಅವರ ಸಮಾಯಕ ಆಸ್ತಿಯಲ್ಲಿನ ಅವರ ಪಾಲಿನ ಮೊತ್ತವನ್ನು ನಿರ್ಧರಿಸುವದಕ್ಕೇನೂ ಅಭ್ಯಂತರವಿರಲಾರದು.

## ೫೬ ಈ ಕಲಮಿನ ಪರಿಮಿತಿ ಮತ್ತು ಸ್ತ್ರೀ ವಾರಸದಾರರು

ಹಿಂದೂಕೋಡಿನ ರಚನೆಯಲ್ಲಿ ಸ್ತ್ರೀ ವಾರಸದಾರರಿಗೆ ಹೆಚ್ಚಿನ ಸೌಲಭ್ಯಕೊಡು

ಈ ಪಾಲುಗಾರಿಕೆಯಲ್ಲಿ ಮೇಲ್ಕಾಣಿಸಿದ ಹಿಂದುವಿಗೆ ಸಲ್ಲುವ ಪಾಲು ಸ್ವತಂತ್ರ ಆಸ್ತಿಯಾಗಿ ಪ್ರಾಪ್ತವಾಗುವದೆಂದು ಪ್ರ ಗಣಿಸತಕ್ಕದ್ದು.

[೨] ಈ ಕಾಯ್ದೆ ಪಾಸಾಗದಿದ್ದಲ್ಲಿ, ಯಾರಿಗೆ ಅಳಿಯಸಂತಾನ ಕಾನೂನು ಅನ್ವಯಿಸುತ್ತಿತ್ತೋ ಅಂಥ ಹಿಂದುವಿಗೆ ಮರಣ ಕಾಲದಲ್ಲಿ ಕುಟುಂಬ ಅಥವಾ ಕವರುವಿನ ಆಸ್ತಿಯಲ್ಲಿ ಅವಿ ಭಕ್ತವಾದ ಬಾಧ್ಯತೆಯಿದ್ದು, ಆತನು ಅಥವಾ ಅವಳು ಈ ಕಾಯ್ದೆ ಜಾರಿಗೆ ಬಂದ ನಂತರ ಮೃತರಾದರೆ, ಅನುಕ್ರಮ ವಾಗಿ ಅವನ ಅಥವಾ ಅವಳ ಕುಟುಂಬದ ಅಥವಾ ಕವರು ವಿನಲ್ಲಿಯ ಅವಿಭಕ್ತ ಬಾಧ್ಯತೆಯು ಅಳಿಯಸಂತಾನ ಕಾನೂ ನಿಗನುಸಾರವಾಗಿ ಅನುಪ್ರಾಪ್ತವಾಗದೆ, ಈ ಕಾಯ್ದೆಗನು ಸಾರವಾದ ಮೃತ್ಯುಲೇಖೀಯ ಅಥವಾ ಅಮೃತ್ಯುಲೇಖೀಯ ವಾರಸಾ ಕ್ರಮಕ್ಕನುಸಾರವಾಗಿ ಸಂದರ್ಭಾನುಸಾರ ಅನುಪ್ರಾಪ್ತ ವಾಗತಕ್ಕದ್ದು.

**ವಿವರಣೆ—** ಈ ಉಪ ಕಲಮಿಗೋಸ್ಕರ ಕುಟುಂಬ ಅಥವಾ ಕವರುವಿನ ಆಸ್ತಿಯಲ್ಲಿನ ಹಿಂದುವಿನ ಅವಿಭಕ್ತ ಬಾಧ್ಯತೆ ಯೆಂದರೆ, ಆತನ ಅಥವಾ ಅವಳ ಮರಣಪೂರ್ವದಲ್ಲಿ ಕುಟುಂಬ ಅಥವಾ ಕವರುವಿನ ಯಾವತ್ತೂ ಜೀವಂತ ಸದಸ್ಯರಲ್ಲಿ ತಲೆಗೊಂದು ಪಾಲಿನಂತೆ ಆಸ್ತಿಯ ವಿಭಜನೆಯಾಗಿದ್ದರೆ, ಕುಟುಂಬ ಅಥವಾ ಕವರುವಿನ ಆಸ್ತಿಯಲ್ಲಿ ಅನುಕ್ರಮವಾಗಿ ಆ ಹಿಂದುವಿಗೆ ಸಲ್ಲು ತ್ತಿದ್ದ ಪಾಲೆಂದು ತಿಳಿಯತಕ್ಕದ್ದು; ಇಂಥ ವಿಭಜನೆಗಾಗಿ ಕುಟುಂಬ ಅಥವಾ ಕವರುವಿನ ಸದಸ್ಯರಿಗೆ ಅಳಿಯಸಂತಾನ ಕಾನೂನಿನನ್ವಯ ವಾಟಣಿ ಕೇಳುವ ಹಕ್ಕಿರಬೇಕಾದ ಅಗತ್ಯ ವಿಲ್ಲ; ಮತ್ತು ಇಂಥ ವಾಟಣಿಯಲ್ಲಿ ಸ್ತ್ರೀ ಅಥವಾ ಪುರುಷ ಹಿಂದುವಿಗೆ ಸಲ್ಲುವ ಪಾಲು ಸ್ವತಂತ್ರ ಆಸ್ತಿಯಾಗಿ

ಪ್ರಾಪ್ತವಾಗುವದೆಂದು ಪರಿಗಣಿಸತಕ್ಕದ್ದು.

[೩] ಉಪಕಲಮು [೧] ರಲ್ಲೇನೆ ಅಡಕವಾಗಿರಲಿ, ಈ ಕಾಯ್ದೆ ಜಾರಿಗೆ ಬಂದನಂತರ ಸ್ಥಾನಮ್‌ದಾರನು ಮೃತಪಟ್ಟರೆ, ಸ್ಥಾನಮ್‌ದಾರನ ವಶಕ್ಕಿದ್ದ ಸ್ಥಾನಮ್ ಆಸ್ತಿಯು ಸ್ಥಾನಂದಾದಾರನ ಕುಟುಂಬಸ್ಥರು ಮತ್ತು ಆತನ ವಾರಸದಾರರಿಗೆ ಅನುಪ್ರಾಪ್ತ (Devolve) ವಾಗತಕ್ಕದ್ದು; ಇಂಥ ಅನುಪ್ರಾಪ್ತಿಯು ಸ್ಥಾನಮ್‌ದಾರನ ಮರಣಪೂರ್ವದಲ್ಲಿ ಸ್ಥಾನಮ್‌ದಾರ ಹಾಗೂ ಆತನ ಕುಟುಂಬಸ್ಥರಲ್ಲಿ ತಲೆಗೊಂದರಂತೆ ಪಾಲುಸಿಗುವಹಾಗೆ ವಿಭಜನೆಯಾಗಿದ್ದರೆ ಹೇಗೋ, ಹಾಗಾಗತಕ್ಕದ್ದು; ಈ ರೀತಿಯಾಗಿ ಸ್ಥಾನಂದಾರನ ಕುಟುಂಬಸ್ಥರು ಹಾಗೂ ವಾರಸದಾರರು ಪಡೆಯುವಪಾಲು ಅವರವರ ಸ್ವತಂತ್ರ ಆಸ್ತಿಯಾಗಿ ಸಲ್ಲತಕ್ಕದ್ದು.

**ವಿವರಣೆ—** ಈ ಉಪಕಲಮಿಗೋಸ್ಕರ ಸ್ಥಾನಮ್‌ದಾರನ ಕುಟುಂಬವು, ಈ ಕಾಯ್ದೆ ಪಾಸಾಗದಿದ್ದ ಪಕ್ಷದಲ್ಲಿ ರೂಢಿ ಅಥವಾ ಪದ್ಧತಿಯ ಬಲದಿಂದ ಸ್ಥಾನಮ್‌ದಾರನ ಸ್ಥಾನಕ್ಕೇರಬಲ್ಲ ಪುರುಷ ಸದಸ್ಯರುಳ್ಳ ಆತನ ಎಲ್ಲ ಕುಟುಂಬ ಶಾಖೆಗಳನ್ನು ಒಳಗೊಳ್ಳತಕ್ಕದ್ದು.

## ಟೀಕೆ

### ೫೭ ತರ್ವಾಡ, ತವಾಝಿ, ಕುಟುಂಬ ಇತ್ಯಾದಿ

ಈ ಕಲಮಿನಲ್ಲಿ ಬರುವ ತರ್ವಾಡ, ತವಾಝಿ, ಕುಟುಂಬ, ಕವರು, ಮತ್ತು ಇಲ್ಲೋಂಗಳು ದಕ್ಷಿಣ ಭಾರತದಲ್ಲಿ ಕಂಡುಬರುವ ವಿವಿಧ ಪ್ರಕಾರದ ಏಕತ್ರ ಕುಟುಂಬಗಳಾಗಿವೆ. ಹೆಚ್ಚುಕಡಿಮೆ ಮಿತಾಕ್ಷರ ಹಿಂದೂ ಸಮಾಯಕದಂತೆಯೇ- ಈ ಯೆಲ್ಲ ಏಕತ್ರ ಕುಟುಂಬಗಳೂ ಏಕತ್ರ ಸ್ವಾಮಿತ್ವದ ಆಸ್ತಿಯನ್ನು ಪಡೆದಿವೆ. ತರ್ವಾಡ, ತವಾಝಿ, ಮೊದಲಾದ ಆಸ್ತಿಗಳಲ್ಲಿನ ಬಾಧ್ಯತೆಯೆಂದರೆ, ಮೃತನಿಗೆ ಈ ವಿವಿಧ ಪ್ರಕಾರದ ಏಕತ್ರ ಆಸ್ತಿಗಳಲ್ಲಿರುವ ಸಮಾಯಕ ಬಾಧ್ಯತೆಯಾಗಿರುತ್ತದೆ.

ತರ್ವಾಡ ತವಾಝಿ ಅಥವಾ ಇಲ್ಲೋಮ ಆಸ್ತಿಯಲ್ಲಿನ ಮೃತನ ಬಾಧ್ಯತೆಯನ್ನು ಕಂಡು ಹಿಡಿಯುವ ವಿಧಾನವು ೧೧ನೆಯ ಉ. ಕಲಮಿನ ವಿವರಣೆಯಲ್ಲಿದೆ. ಕುಟುಂಬ ಅಥವಾ ಕವರುವಿನಲ್ಲಿಯ ಸಮಾಯಕ ಬಾಧ್ಯತೆಯನ್ನು ಕಂಡು ಹಿಡಿಯುವ ವಿಧಾನವು ೨ನೆಯ ಉಪಕಲಮಿನ ವಿವರಣೆಯಲ್ಲಿ ಉಪಲಬ್ಧವಿದೆ.

ತರ್ವಾಡವು ಮರುಮಕ್ಕತ್ತಯಂ ಕಾನೂನಿಗಂಕಿತವಾದ ಏಕತ್ರ ಆಸ್ತಿಯುಳ್ಳ ಏಕತ್ರ ಕುಟುಂಬವಾಗಿದೆ. ತರ್ವಾಡದ ವ್ಯವಸ್ಥಾಪಕ (ಕರ್ತಾ)ನನ್ನು ಕರ್ಣವನ್ ಎಂದೂ, ಮಿಕ್ಕ ಕುಟುಂಬಸ್ಥರನ್ನು ಅನಂದ್ರವನ್ ಎಂದೂ ಕರೆಯಲಾಗುತ್ತದೆ. ತವಾಝಿಯು ತರ್ವಾಡದಲ್ಲಿನ ಒಂದು ಶಾಖೆ. ಶಾಖೆಯ ಪ್ರಮುಖಳು ತರ್ವಾಡದ ಒಬ್ಬ ಸ್ತ್ರೀ ಸದಸ್ಯಳಾಗಿದ್ದು, ಅವಳ ಅನುವಂಶಿಕರು ಶಾಖಾ ಸದಸ್ಯರೆನಿಸುತ್ತಾರೆ, (A I R 1954 Mad 987).

ಕುಟುಂಬವು ಅಳಿಯಸಂತಾನ ಕಾನೂನಿಗಂಕಿತವಾದ ಏಕತ್ರ ಕುಟುಂಬ ವಾಗಿದೆ. ಕುಟುಂಬಕ್ಕೆ ಏಕತ್ರವಾದ ಆಸ್ತಿಯುಂಟು. ಕವರು, 'ಕುಟುಂಬ'ದಲ್ಲಿನ ಸ್ತ್ರೀ ಪ್ರಮುಖವಾದ ಒಂದು ಶಾಖೆಯಾಗಿದೆ. ಸ್ತ್ರೀ ಯೊಬ್ಬಳ ಕವರು ಎಂದರೆ, ಅವಳು, ಅವಳ ಮಕ್ಕಳು ಹಾಗೂ ಅವಳ ಹೆಣ್ಣುವಳಿಯ ಎಲ್ಲ ಅನುವಂಶಿಕರನ್ನೊಳಗೊಂಡ ಗುಂಪೆಂದು ಅರ್ಥ. ಪುರುಷನೊಬ್ಬನ ಕವರು ಎಂದರೆ, ಆತನ ತಾಯಿಯ ಕವರು ಎಂದು ತಿಳಿಯತಕ್ಕದ್ದು, (ಮದ್ರಾಸ ಅಳಿಯ ಸಂತಾನ ಕಾಯ್ದೆ ೧೯೪೯ ಕಲಮು ೩ ಕ್ಲಾಜ(ಬ) ).

## ೫೮ ಇಲ್ಲೋಮ್

'ಇಲ್ಲೋಮ್' ಇದು ನಂಬೂದ್ರಿಗಳ ಏಕತ್ರ ಕುಟುಂಬ. ಇಲ್ಲೋಮ್ ಆಸ್ತಿ ಏಕತ್ರವೂ ಸಮಾಯಕವೂ ಆಗಿರುತ್ತದೆ. ಇಲ್ಲೋಮಿನ ಸ್ತ್ರೀ ಸದಸ್ಯಳು ವಿವಾಹದ ಪರಿಣಾಮವಾಗಿ ತನ್ನ ಪೂರ್ವದ ಇಲ್ಲೋಮ್ ಸದಸ್ಯತ್ವವನ್ನು ಕಳೆದುಕೊಂಡು, ಗಂಡನ ಇಲ್ಲೋಮಿನ ಸದಸ್ಯಳಾಗುತ್ತಾಳೆ. ಇಲ್ಲೋಮ್ ಆಸ್ತಿ ಬಹುತರ ಅವಿ ಭಾಜ್ಯ ವಾಗಿರುತ್ತದೆ ಆದರೆ, ಪ್ರಸ್ತುತ ಕಾಯ್ದೆಯಿಂದ ಅದು ವಿಭಾಜ್ಯ ವಾಗು ವುದರಲ್ಲಿ ಸಂದೇಹವಿಲ್ಲ.

## ಸ್ಥಾನಂ ಆಸ್ತಿಗಳು

ರಾಜ ಕುಟುಂಬಗಳಲ್ಲಿ ಹಿರಿಯ ರಾಜನ ಸ್ಥಾನ ಮತ್ತು ಆ ಸ್ಥಾನಕ್ಕೆ ಸಲ್ಲುವ ಆಸ್ತಿ ವಿಶೇಷಗಳಿಗೆ 'ಸ್ಥಾನೋಮ್' ಎಂದು ಹೆಸರಿದೆ. ರಾಜರುಗಳಾದರೂ ತಮ್ಮ ಕುಟುಂಬದ ಇತರ ಹಿರಿಯರಿಗೂ, ಉಚ್ಚ ಅಧಿಕಾರಿಗಳಿಗೂ 'ಸ್ಥಾನೋಂ' ಸಲ್ಲಿಸು

ತ್ತಿದ್ದರು. ಶ್ರೀಮಂತ ತರ್ವಾಡಗಳಲ್ಲಿ ಸಹ ಕರ್ಣವನ್ ಸ್ಥಾನಾಪನ್ನನಿಗೆ ಹೆಚ್ಚಿನ ಆಸ್ತಿ ಸಲ್ಲಿಸುವದು ಅಪರೂಪವಲ್ಲ.

ಮಲಬಾರ ಕಾನೂನಿನನ್ವಯ ಸ್ಥಾನಮ್ ಆಸ್ತಿಗಳು ಅವಿಭಾಜ್ಯ ಆಸ್ತಿಗಳಾಗಿವೆ. ಈ ಆಸ್ತಿಗಳ ಅವಿಭಾಜ್ಯತೆ ಪರಂಪರಾಗತ ರೂಢಿಯ ಪರಿಣಾಮವಾಗಿವೆ. ಕಾರಣ ಪ್ರಸ್ತುತ ಸ್ಥಾನಮ್‌ದಾರನ ಮರಣಾನಂತರ ಸ್ಥಾನಮ್ ಆಸ್ತಿಗಳನ್ನು ವಾಟಣಿ ಮಾಡಿ ಕೊಳ್ಳಬಹುದೆಂದು ಈ ಕಾಯ್ದೆ ವಿಧಿಸುತ್ತದೆ. ಇಂಥ ವಾಟಣಿಯಲ್ಲಿ ಪಾಲು ಪಡೆ ಯುವವರು ಎರಡು ಪ್ರಕಾರ ವಾಗಿದ್ದಾರೆ: ೧) ಸ್ಥಾನಂದಾರನ ಕುಟುಂಬದ ಸದಸ್ಯರು, ಮತ್ತು ೨) ಸ್ಥಾನಂದಾರನ ವಾರಸದಾರರು.

## ಕ. ೮

ಗಂಡಸರ ವಾರಸಾ ಕ್ರಮವನ್ನು ಕುರಿತು ಸಾಮಾನ್ಯನಿಯಮಗಳು. ಅಮೃತ್ಯುಲೇಖೀಯನಾಗಿ ಮೃತನಾಗುವ ಪುರುಷ ಹಿಂದುವಿನ ಆಸ್ತಿಯು ಈ ಅಧ್ಯಾಯದ ವಿಧಾ ಙಗಳಿಗನುಸಾರವಾಗಿ ಅನುಪ್ರಾಪ್ತವಾಗತಕ್ಕದ್ದು:-

ಅ ಮೊದಲನೆಯದಾಗಿ, ಪರಿಶಿಷ್ಟದ ೧ನೆಯ ವರ್ಗದಲ್ಲಿ ನಿರ್ದಿಷ್ಟರಾದ ಸಂಬಂಧಿಕರಿಗೆ;

ಬ ಎರಡನೆಯದಾಗಿ, ೧ನೆಯ ವರ್ಗದ ವಾರಸದಾರರಾರೂ ಇಲ್ಲದಿದ್ದ ಪಕ್ಷದಲ್ಲಿ ಪರಿಶಿಷ್ಟದ ೨ನೆಯವರ್ಗದಲ್ಲಿ ನಿರ್ದಿಷ್ಟರಾದ ಸಂಬಂಧಿಕರಿಗೆ;

ಕ ಮೂರನೆಯದಾಗಿ, ಎರಡೂ ವರ್ಗದ ಯಾವ ವಾರಸದಾರರೂ ಇಲ್ಲದಿದ್ದ ಪಕ್ಷದಲ್ಲಿ ಮೃತನ ಗಂಡುವಳಿಗರಿಗೆ (Agnates);

ಡ ಕೊನೆಯದಾಗಿ, ಗಂಡುವಳಿಗರಾರೂ ಇಲ್ಲದಿದ್ದರೆ, ಮೃತನ ಹೆಣ್ಣುವಳಿಗರಿಗೆ (Cognates);

### ಟೀಕೆ

### ೬೦ ವ್ಯಾಪ್ತಿ

ಹಿಂದೂ ಗಂಡಸನೊಬ್ಬನು ಅಮೃತ್ಯುಲೇಖೀಯನಾಗಿ ಮೃತನಾದರೆ, ಆತನ

ಆಸ್ತಿಗೆ ವಾರಸಾಪ ಯುವ ವಾರಸದಾರಾರರೆಂದೂ, ಅವರು ವಾರಸಾ ಪಡೆಯುವ ವಿಧಾನ ಹಾಗೂ ಕ್ರಮಗಳೇನೆಂದೂ ಈ ಕಲಮಿನಲ್ಲಿ ವಿಧಿಸಲಾಗಿದೆ.

ಹಿಂದೂ ಗಂಡಸಿನ ವಾರಸದಾರರನ್ನು ಈ ಕಲಮು ೪ ವರ್ಗಗಳಾಗಿ ವಿಭಾಗಿಸಿದೆ. ೧ನೆಯ ಮತ್ತು ೨ನೆಯ ವರ್ಗದ ವಾರಸದಾರರು ಪರಿಶಿಷ್ಟದಲ್ಲಿ ಸವಿಾವಿಷ್ಟರಾಗಿದ್ದಾರೆ; ೩ನೆಯ ಮತ್ತು ೪ನೆಯ ವರ್ಗದ ವಾರಸದಾರರೆಂದರೆ ಅನುಕ್ರಮವಾಗಿ ಗಂಡುವಳಿಗೆ (Agnates) ರು ಮತ್ತು ಹೆಣ್ಣುವಳಿಗೆ (Cognates) ರಾಗಿದ್ದಾರೆ. ಗಂಡುವಳಿಗರು ಮತ್ತು ಹೆಣ್ಣುವಳಿಗರಲ್ಲಿ ವಾರಸಾಪ್ರಾಪ್ತಿಯ ಪ್ರಾಶಸ್ತ್ಯಕ್ರವೇನೆಂಬುದನ್ನು ೧೨ ಮತ್ತು ೧೩ ನೆಯ ಕಲಮುಗಳಲ್ಲಿ ಹೇಳಲಾಗಿದೆ

ಈ ಕಾಯ್ದೆ ನಿರ್ದಿಷ್ಟ ಪಡಿಸಿರುವ ನಾಲ್ಕು ವರ್ಗಗಳ ಅವಕಾಶಕ್ಕೊಳಪಡದವರಾರೂ ಹಿಂದೂ ಗಂಡಸಿಗೆ ವಾರಸದಾರರಾಗಲಾರರು. ಹಿಂದೂ ಕಾನೂನಿನಲ್ಲಿ ಮೃತನ ಎಲ್ಲ ಗಂಡುವಳಿಗರಾಗಲಿ, ಅಥವಾ ಎಲ್ಲ ಹೆಣ್ಣುವಳಿಗರಾಗಲಿ ಆತನ ವಾರಸದಾರರೆನಿಸುತ್ತಿರಲಿಲ್ಲ, ( ರಾಮಚಂದ್ರ ವಿ. ವಿನಾಯಕ 41 I A 290 . ಈ ಕಾಯ್ದೆಯಲ್ಲಿ ಮೃತನಿಗೆ ಎಷ್ಟುದೂರದ ಸಂಬಂಧಿಕರಾಗಿದ್ದರೂ, ಆತನ ಯಾವತ್ತೂ ಗಂಡುವಳಿಗರು ಮತ್ತು ಹೆಣ್ಣುವಳಿಗರು ವಾರಸದಾರರೆನಿಸುತ್ತಾರೆ.

## ೬೧ ವಾರಸಾ ಪ್ರಾಪ್ತಿಯ ಕ್ರಮ

ಹಿಂದೂ ಪುರುಷರ ವಾರಸಾ ಪ್ರಾಪ್ತಿಯಕ್ರಮವು ಈ ಅಧ್ಯಾಯ (೨ನೆಯ ಅಧ್ಯಾಯ)ದ ಏರ್ಪಾಡುಗಳಿಗನುಸಾರವೇ ಇರತಕ್ಕದ್ದೆಂದು ಈ ಕಲಮು ಸ್ಪಷ್ಟಪಡಿಸುತ್ತದೆ. ಕಾರಣ ಈಪೂರ್ವದ ಹಿಂದೂ ಕಾನೂನಿನ ವಾರಸಾಕ್ರಮದ ನಿಯಮಗಳು ಇನ್ನು ಮೇಲೆ ಅಧಿಕೃತ ಕಾನೂನಲ್ಲವೆಂದು ಸ್ಪಷ್ಟವಾಗುತ್ತದೆ. ಅಲ್ಲದೆ, ವಾರಸಾಹಕ್ಕು, ವಾರಸಾಪ್ರಾಪ್ತಿಯಲ್ಲಿ ಪ್ರಾಶಸ್ತ್ಯ ಮತ್ತು ವಾರಸಾ ಪ್ರಾಪ್ತಿಗೆ ಅನರ್ಹತೆ ಮೊದಲಾದ ಪ್ರಶ್ನೆಗಳೂ ಈ ಕಾಯ್ದೆಯ ಏರ್ಪಾಡುಗಳನ್ವಯವೇ ನಿರ್ಧಾರವಾಗತಕ್ಕದ್ದೆಂದು ಸೂಚಿತವಾಗುತ್ತದೆ.

ಈ ಕಾಯ್ದೆ ಜಾರಿಗೆ ಬಂದನಂತರ ಮೃತರಾದ ಹಿಂದುಗಳಿಗೆ ಮಾತ್ರ ಮೇಲ್ಕಾಣಿಸಿದ ವಾರಸಾ ಏರ್ಪಾಡುಗಳು ಅನ್ವಯಿಸುತ್ತವೆ. ಈ ಕಾಯ್ದೆ ಜಾರಿಗೆ ಬರುವ ಪೂರ್ವದಲ್ಲಿ ಮೃತರಾದ ಹಿಂದೂಗಳಿಗೆ ಹಿಂದಿನ ಹಿಂದು ಕಾನೂನಿನ ಏರ್ಪಾಡು

ಗಳೀ ಅನ್ವಯಿಸುತ್ತವೆ. ಯಾಕಂದರೆ, ಈ ಕಾಯ್ದೆ ಜಾರಿಗೆ ಬರುವ ಪೂರ್ವದಲ್ಲಿ ಮೃತನಾದ ಹಿಂದುವಿನ ಆಸ್ತಿಗೆ ಮರಣದಕ್ಷಣವೇ ವಾರಸಾ ತೆರೆಯುವದಲ್ಲದೆ,ಹೊಸ ಕಾಯ್ದೆ ಜಾರಿಗೆ ಬರುವವರೆಗೆ ವಾರಸಾ ದಾರಿಕಾಯಲಾರದು. ದಾಯ (Inheritance) ವೆಂದೂ ಸ್ಥಗಿತವಾಗಿರಲಾರದೆಂಬ ತತ್ವ ಸುಪ್ರಸಿದ್ಧವಿದೆ.

## ೬.೨ ವಾರಸದಾರರ ವರ್ಗೀಕರಣ

ಹಿಂದೂ ಗಂಡಸಿನ ಆಸ್ತಿಗೆ ವಾರಸಾಹಕ್ಕು ಪಡೆಯಬಲ್ಲ ಯಾವತ್ತೂ ವಾರಸದಾರರನ್ನು ಈ ಕಲಮಿನ, (ಅ), (ಬ), (ಕ) ಮತ್ತು (ಡ) ಕ್ಲಾಜುಗಳನ್ವಯ ನಾಲ್ಕು ಗುಂಪುಗಳಲ್ಲಿ ವರ್ಗೀಕರಿಸಲಾಗಿದೆ. ವರ್ಗೀಕರಣದ ಕ್ರಮವನ್ನನುಲಕ್ಷಿಸಿ ವಿವಿಧ ವಾರಸದಾರರಲ್ಲಿ ಪ್ರಾಶಸ್ತ್ಯಕ್ರಮ ವೇನೆಂಬುದನ್ನು ಕಂಡುಕೊಳ್ಳಬಹುದು. ವಾರಸಾ ಪ್ರಾಪ್ತಿಯು "ಮೊದಲನೆಯದಾಗಿ" ೧ನೆಯ ವರ್ಗದವರಿಗೆ ಸಲ್ಲುವದೆಂದು ಹೇಳಲಾಗಿದೆ. ಯಾವ ಅನರ್ಹತೆಯಿಲ್ಲದ ಒಬ್ಬನೇಒಬ್ಬ ೧ನೆಯ ವರ್ಗದ ವಾರಸದಾರ ಇರುವವರೆಗೂ, ಮುಂದಿನ ವರ್ಗದ ವಾರಸಾದಾರರಿಗೆ ವಾರಸಾಸಿಕ್ಕದು. ೧ನೆಯ ವರ್ಗದವರಾರೂ ಇಲ್ಲದಿದ್ದರೆ ಮಾತ್ರ, "ಎರಡನೆಯದಾಗಿ" ೨ನೆಯ ವರ್ಗದ ವಾರಸದಾರರಿಗೆ ವಾರಸಾ ಸಲ್ಲುತ್ತದೆ. ಎರಡನೆಯ ವರ್ಗದ ಒಬ್ಬನೇ ಅರ್ಹ ವಾರಸದಾರನಿರುವವರೆಗೂ, ಆತನು ಮೂರನೆಯ ಹಾಗೂ ನಾಲ್ಕನೆಯ ವರ್ಗದ ವಾರಸದಾರರನ್ನು ವ್ಯಾವರ್ತಿಸು (Exclude)ತ್ತಾನೆ. ೧ ಹಾಗೂ ೨ನೆಯ ವರ್ಗದ ಯಾವ ವಾರಸದಾರರೂ ಇಲ್ಲದಿದ್ದ ಪಕ್ಷದಲ್ಲಿ ಮಾತ್ರ ೩ ನೆಯ ವರ್ಗದವರಿಗೆ ವಾರಸಾ ಸಿಗುತ್ತದೆ. ಮೂರನೆಯ ವರ್ಗದ ಒಬ್ಬನೇ ವಾರಸದಾರನಿರುವವರೆಗೂ, ೪ ನೆಯ ವರ್ಗದವರು ವ್ಯಾವರ್ತಿತರಾಗುತ್ತಾರೆ. ಮೊದಲಿನ ಮೂರು ವರ್ಗದ ಯಾವವಾರಸದಾರರೂ ಇಲ್ಲದಿದ್ದರೆ ಮಾತ್ರ, ೪ನೆಯ ವರ್ಗದವರಿಗೆ ವಾರಸಾ ಸಿಗುತ್ತದೆ.

ಈ ವಾರಸಾ ಕ್ರಮವು ನಂಬೂದ್ರಿಗಳನ್ನೊಳಗೊಂಡು ಯಾವತ್ತೂ ಹಿಂದುಗಳಿಗೆ ಅನ್ವಯಿಸುತ್ತದೆ. ಆದರೆ, ಈ ಮೊದಲು ಮರುಮಕ್ಕತ್ತಯಂ ಮತ್ತು ಅಳಿಯ ಸಂತಾನ ಕಾನೂನಿಗಂಕಿತರಾಗಿದ್ದ ಹಿಂದುಗಳಿಗೆ ಮಾತ್ರ ಇದೇ ಕಾಯ್ದೆಯ ೧೭ನೆಯ ಕಲಮು ಬೇರೆ ವಾರಸಾ ಕ್ರಮವನ್ನು ವಿಧಿಸಿದೆ. ಈ ಕ್ರಮದಲ್ಲಿ ಗಂಡುವಳಿಗರು ಮತ್ತು ಹೆಣ್ಣುವಳಿಗರು ಬೇರೆ ಬೇರೆ ವರ್ಗ ವಾಗಿರದೆ, ಒಂದೇ ವರ್ಗದಲ್ಲಿ ಸಮಾವಿಷ್ಟರಾಗಿದ್ದಾರೆ.

ವಾರಸದಾರರಾರೂ ಇಲ್ಲದಾಗ ಆಸ್ತಿ ರಾಜ್ಯಕ್ಕೆ ಸಲ್ಲುವದು ಪರಂಪರಾಗತವಾದ ತತ್ವವಾಗಿದೆ. ಮೇಲ್ಕಾಣಿಸಿದ ವರ್ಗಗಳ ಯಾವ ವಾರಸದಾರರೂ ಇಲ್ಲದಿರುವಾಗ ಮೃತನ ಆಸ್ತಿಯು ಸರಕಾರಕ್ಕೆ ಸಲ್ಲತಕ್ಕದ್ದೆಂದು ಈ ಕಾಯ್ದೆಯ ೨೯ನೆಯ ಕಲಮು ವಿಧಿಸುತ್ತದೆ.

## ೬೩ ವರ್ಗೀಕರಣದ ತಳಹದಿ

ಹಿಂದೂ ಕಾನೂನಿನ ಪರಂಪರಾಗತ ಸಂಪ್ರದಾಯಗಳಾದ ಮಿತಾಕ್ಷರ ಹಾಗೂ ದಾಯಭಾಗ ಪದ್ಧತಿಗಳಲ್ಲಿಯೂ ವಾರಸದಾರರ ವರ್ಗೀಕರಣವಿದೆ. ಮಿತಾಕ್ಷರದಲ್ಲಿ ರಕ್ತಸಾಮಿಪ್ಯವು (Propinquity) ವರ್ಗೀಕರಣದ ತಳಹದಿಯೆನಿಸಿದ್ದರೆ, ದಾಯಭಾಗದಲ್ಲಿ ಪಿಂಡದಾನಾಧಿಕಾರವು (Spiritual Efficacy) ತಳಹದಿಯಾಗುತ್ತದೆ. ಈ ಯೆರಡನ್ನೂ ಈ ಕಾಯ್ದೆ ನಿರಾಕರಿಸಿದೆ. ಮರುಮಕ್ಕತ್ತಯಂ ಅಥವಾ ಅಳಿಯ ಸಂತಾನ ಕಾನೂನಿನ ವರ್ಗೀಕರಣ ವಿಧಾನವನ್ನೂ, ಇಲ್ಲಿ ಅನುಸರಿಸಲಾಗಿಲ್ಲ. ಕಾರಣ ಈ ಕಾಯ್ದೆಯ ವಾರಸದಾರರ ವರ್ಗೀಕರಣಕ್ಕೆ ಯಾವುದೇ ತಳಹದಿಯುಂಟೆಂದು ಹೇಳುವದು ಕಷ್ಟವಿದೆ. ಬಹಳವಾದರೆ ಮೃತನ ಪ್ರೇಮ ಹಾಗೂ ಮಮತೆಗಳಿಗೆ ವರ್ಗೀಕರಣದಲ್ಲಿ ಅವಕಾಶವೀಯಲಾಗಿದೆ ಎನ್ನಬಹುದು.

## ೬೪ ಮಿತಾಕ್ಷರದಲ್ಲಿ ವಾರಸದಾರರ ವರ್ಗೀಕರಣ

ಮಿತಾಕ್ಷರದಲ್ಲಿ ವಾರಸದಾರರು ಮುಖ್ಯವಾಗಿ ಎರಡು ವರ್ಗದವರಿದ್ದಾರೆ, ೧) ಸಮಾನ ಗೋತ್ರ ಸಪಿಂಡರು ಅಥವಾ ಗಂಡುವಳಿಗರು ಮತ್ತು ೨) ಭಿನ್ನಗೋತ್ರ ಸಪಿಂಡರು ಅಥವಾ ಹೆಣ್ಣುವಳಿಗರು. ಸಮಾನ ಗೋತ್ರ ಸಪಿಂಡರಲ್ಲಿ ಮತ್ತೆ ಗೋತ್ರಜ ಸಪಿಂಡರು ಹಾಗೂ ಸಮಾನೋದಕರೆಂದು ಎರಡು ವರ್ಗಗಳಿವೆ. ಭಿನ್ನ ಗೋತ್ರ ಸಪಿಂಡರು ಅಥವಾ ಬಂಧುಗಳಲ್ಲಿಯೂ ೧) ಆತ್ಮಬಂಧು ೨) ಪಿತೃಬಂಧು ಹಾಗೂ (೩) ಮಾತೃ ಬಂಧು ಗಳೆಂದು ಮೂರು ವರ್ಗಗಳಿವೆ.

ಮೃತನಿಂದ ವಂಶಾನುಕ್ರಮದಲ್ಲಿ (Descent) ಮತ್ತು ವಂಶಾಗ್ರಕ್ರಮದಲ್ಲಿ (Ascent) ಏಳನೆಯ ತಲೆಮಾರಿನ ವರೆಗಿನ ಗಂಡುವಳಿ ಸಂಬಂಧಿಕರು ಗೋತ್ರಜ ಸಪಿಂಡರೆನಿಸುತ್ತಾರೆ. ಆತನ ಪತ್ನಿ (ವಿಧವೆ) ಮಗಳು ಹಾಗೂ ಮಗಳ ಮಗ ಮತ್ತು ವಂಶಾಗ್ರ ಕ್ರಮದಲ್ಲಿ ಮೂವರು ಪುರುಷ ಅಗ್ರವಂಶಿಕರ ಪತ್ನಿಯರು–ಇವರೂ ಗೋತ್ರಜ ಸಪಿಂಡರೇ ೮ನೆಯ ತಲೆಮಾರಿನಿಂದ ೧೪ನೆಯ ತಲೆಮಾರಿನ ವರೆಗಿನ ಗಂಡುವಳಿಗರು ಸಮಾನೋದಕರೆನಿಸುತ್ತಾರೆ.

ಬಂಧುಗಳಲ್ಲಿ ಎಲ್ಲರಿಗೂ ದಾಯಾಧಿಕಾರವಿಲ್ಲ. ತಾಯಿಯಿಂದ ಐದನೆಯ ತಲೆಮಾರಿನ ಅಜೆಗೂ, ತಂದೆಯಿಂದ ಏಳನೆಯ ತಲೆಮಾರಿನಾಜೆಗೂ, ಸಂಬಂಧಿಕರಾದವರು ಬಂಧುಗಳೆನಿಸುವದಿಲ್ಲ. (41 I A 299, 312)

ಮೇಲಿನ ಸಂಗತಿಗಳಿಂದ ಮಿತಾಕ್ಷರ ಸಂಪ್ರದಾಯದಲ್ಲಿ ಮೃತನ ೧೪ ನೆಯ ತಲೆಮಾರಿನ ವರೆಗಿನ ಗಂಡುವಳಿಗರು, ಬಂಧುಗಳು ಅಥವಾ ಹೆಣ್ಣುವಳಿಗರನ್ನು ವ್ಯಾವರ್ತಿಸು (Exclude) ವರೆಂಬು ಸ್ಪಷ್ಟವಾಗುತ್ತದೆ. ಗಂಡುವಳಿಗರೊಡನೆಯೇ ವಾರಸಾ ಪಡೆಯುವ ಒಬ್ಬನೇಒಬ್ಬ ಹೆಣ್ಣುವಳಿಗನೆಂದರೆ ಮಗಳಮಗ ಈತನ ಹಕ್ಕು. ಮಿತಾಕ್ಷರ ಕಾನೂನಿನಲ್ಲಿ ಅಪವಾದವಾಗಿ ಉಪಲಬ್ಧವಿದೆ.

## ೬೫ ದಾಯಭಾಗದಲ್ಲಿ ವಾರಸದಾರರ ವರ್ಗೀಕರಣ

ದಾಯಭಾಗದಲ್ಲಿ ಪಿಂಡದಾನದ ಅಧಿಕಾರವೇ ದಾಯಾಧಿಕಾರದ ತಳಹದಿಯೆಂದು ಈ ಮೊದಲು ಹೇಳಲಾಗಿದೆ. ಪರ್ವಣ ಶ್ರಾದ್ಧ ವಿಧಿಯಲ್ಲಿ, ಪಿಂಡ,ಪಿಂಡಲೇಪ ಹಾಗೂ ಪಿಂಡೋದಕಗಳನ್ನು ಅರ್ಪಿಸಬಲ್ಲವರನ್ನು (೧) ಸಪಿಂಡರು (೨) ಸಕುಲ್ಯರು ಹಾಗೂ (೩) ಸಮಾನೋದಕರೆಂದು ವಿಭಾಗಿಸಿ ವಾರಸಾಹಕ್ಕು ಕೊಡಲಾಗಿದೆ. ದಾಯಭಾಗದ ಸಪಿಂಡ ವರ್ಗದಲ್ಲಿ ಮಿತಾಕ್ಷರದ ನಾಲ್ಕು ತಲೆಮಾರಿನ ಸಪಿಂಡರಲ್ಲದೆ, ಕೆಲವು ಮಿತಾಕ್ಷರ ಭಿನ್ನಗೋತ್ರರೂ ಸಮಾವಿಷ್ಟರಾಗುತ್ತಾರೆ. ಸಕುಲ್ಯರೆಂದರೆ ಮಿತಾಕ್ಷರದ ೫ ರಿಂದ ೭ನೆಯ ತಲೆಮಾರಿನವರೆಗಿನ ಸಪಿಂಡರಾಗಿದ್ದಾರೆ. ಸಮಾನೋದಕರೆಂದರೆ, ಮಿತಾಕ್ಷರದಂತೆಯೇ ೮ ರಿಂದ ೧೪ ನೆಯ ತಲೆಮಾರಿನವರೆಗಿನ ಸಗೋತ್ರ ಸಪಿಂಡರಾಗಿದ್ದಾರೆ.

ಇಲ್ಲಿ, ೫ ರಿಂದ ೧೪ ನೆಯ ತಲೆಮಾರಿನವರೆಗಿನ ಗಂಡುವಳಿಗರಿಗಿಂತ ಮುಂಚೆಯೇ ಕೆಲವು ಹೆಣ್ಣುವಳಿಗರು ಪಿಂಡದಾನಾಧಿಕಾರದಿಂದ ವಾರಸಾ ಪಡೆಯುವದನ್ನೂ ಕಾಣಬಹುದು. ದಾಯಭಾಗದ ಸಪಿಂಡರು ಮತ್ತು ಸಕುಲ್ಯರು ಕೇವಲ ಗಂಡುವಳಿಗರಾಗಿರದೆ, ಅನೇಕ ಹೆಣ್ಣುವಳಿಗರೂ ಆ ವರ್ಗಗಳಲ್ಲಿ ಸಮಾವೇಶವಾಗುತ್ತಾರೆ.

## ಧರ್ಮಶಾಸ್ತ್ರದ ಗಂಡುವಳಿಗರು

ಮೇಲಿನ ಮಿತಾಕ್ಷರ ವಾರಸದಾರರ ವರ್ಗೀಕರಣದಿಂದ ಮಿತಾಕ್ಷರ ಗೋತ್ರಜ ಸಪಿಂಡರಲ್ಲಿ ಹೆಣ್ಣುವಳಿಗರಾದ ಮೃತನಮಗಳು, ಹಾಗೂ ಮಗಳ ಮಗ ಇವರೂ ಬರುವರೆಂದು ಸ್ಪಷ್ಟವಿದೆ. ಎಂತಲೇ ಧರ್ಮಶಾಸ್ತ್ರದ "ಗೋತ್ರಜ ಸಪಿಂಡ" ಪದವು ಈ ಕಾನೂನಿನ "ಗಂಡುವಳಿಗ" ಪದಕ್ಕೆ ಸಮಾನವಲ್ಲವೆಂದು ಶಾಸಕರು ಭಾವಿಸಿದುದು ಸಮಂಜಸವಾಗಿದೆ. ದಾಯಭಾಗ ಸಂಪ್ರದಾಯಕ್ಕೂ ಈ ಮಾತು ಅನ್ವಯಿಸುತ್ತದೆ.

## ೧ನೆಯ ವರ್ಗದ ವಾರಸದಾರರು




ಮೇಲಿನ ಆಕೃತಿಯಲ್ಲಿ ಕಂಸಿನಲ್ಲಿ ಸೂಚಿಸಲಾದವರು ಮೃತನಿಗಿಂತ ಪೂರ್ವದಲ್ಲೇ ಮೃತರಾದವರೆಂದು ತಿಳಿಯತಕ್ಕದ್ದು. ಉಳಿದವರೆಲ್ಲ ಮೃತನ ಜೀವಂತ ವಾರಸದಾರರಾಗಿದ್ದು, ೧ ನೆಯ ವರ್ಗದಲ್ಲಿ ಆವರಿಗಿರುವ ಕ್ರಮಾಂಕಕ್ಕನುಸಾರವಾಗಿ ಅವರವರ ಕೆಳಗೆ ಅಂಕಿಗಳಿವೆ ತಂದೆಯು ೧ನೆಯ ವರ್ಗದಲ್ಲಿ ಸ್ಥಾನ ಪಡೆದಿಲ್ಲವಾಗಿ ತಂದೆಯ ಕೆಳಗೆ ಅಂಕಿಯಿಲ್ಲ. ತಾಯಿ ೪ ನೆಯ ವಾರಸದಾರಳಾದ್ದರಿಂದ ಅವಳ ಕೆಳಗೆ ೪ ಅಂಕಿ ಇದೆ.

### ೬೬ ಪ್ರಾಪ್ತಿವಿಧಾನ

ಮೇಲ್ಕಾಣಿಸಿದ ಹನ್ನೆರಡೂ ಜನ ವಾರಸದಾರರು ಏಕಕಾಲದಲ್ಲಿ ವಾರಸಾ ಪಡೆಯುತ್ತಾರೆ. ಕಾರಣ ಯಾರು ಮೊದಲು ಯಾರು ನಂತರ ಎಂಬ ಪ್ರಶ್ನೆಯೇಳುವದಿಲ್ಲ. ಪ್ರತಿಯೊಬ್ಬರ ಪಾಲು ಎಷ್ಟೆಂಬುದು ೧೦ನೆಯ ಕಲಮಿನಲ್ಲಿಯ ನಿಯಮಗಳಿಗನುಸಾರವಾಗಿ ನಿರ್ಣಯವಾಗುತ್ತದೆ. ಸ್ತ್ರೀ ವಾರಸದಾರರೆಲ್ಲ ಸ್ವತಂತ್ರ ಆಸ್ತಿಯನ್ನು ಪಡೆಯುತ್ತಾರೆ. ಆಸ್ತಿಯ ಪ್ರಾಪ್ತಿಯು ಸಂಯುಕ್ತಗೇಣಿಯ ಸ್ವರೂಪದಲ್ಲಾಗುವದಲ್ಲದೆ, ಸಮಾಯಿಕ ಗೇಣಿಯೆಂದಲ್ಲ. ಕಾರಣ ಶೇಷಾಧಿಕಾರದ ಪ್ರಶ್ನೆಯೇಳುವದಿಲ್ಲ.

### ೬೭ ಹಿಂದಿನ ಕಾನೂನು

ಮಿತಾಕ್ಷರ ಮತ್ತು ದಾಯಭಾಗ ಕಾನೂನುಗಳಲ್ಲಿ ಮೇಲ್ಕಾಣಿಸಿದ ೧, ೫,

೧೦, ೩, ೯, ಮತ್ತು ೧೨ ನೆಯ ವಾರಸದಾರರು ಮಾತ್ರ ಪ್ರಪ್ರಥಮವಾಗಿ ವಾರಸಾ ಪಡೆಯುವ ವಾರಸದಾರರಾಗಿದ್ದರು, ಅವರೆಲ್ಲ ಏಕ ಕಾಲದಲ್ಲೇ ದಾಯ ಪಡಿಯುತ್ತಿದ್ದರು. ಆದರೆ, ಮಗ ಮೊಮ್ಮಗ ಹಾಗೂ ಮರಿಮಗ – ಇವರು ಸಮಾಯಕ ಗೇಣಿದಾರರೆಂದು ಆಸ್ತಿ ಪಡೆಯುತ್ತಿದ್ದರು. ಕಾರಣ ಅದರಲ್ಲಿ ಶೇಷಾಧಿಕಾರ ಅನುಪ್ರಾಪ್ತಿಗೆ ಅವಕಾಶವಿತ್ತು, (ಮಡಿವಾಳಪ್ಪಾ ವಿ. ಸುಬ್ಬಪ್ಪಾ 39 Bom L.R. 39 ).

## ೬೮ ಮಗ

ಮಗನೆಂದರೆ, ಔರಸ ಮಗ, ದತ್ತಕ ಮಗ, ಅಥವಾ ತಂಜಾವೂರ ರೂಢಿ ಶಾಸನಕ್ಕನುಸಾರವಾಗಿ ನಿಯಮಿತನಾದ ನಿಯಮಿತ(Appointed)ಮಗ ಎಂದರ್ಥ. ಕೂಡಿದ್ದ ಮಗ ಬೇರೆಯಾದ ಮಗ ಇವರಲ್ಲೂ ಈ ಕಾಯ್ದೆಯಲ್ಲಿ ಯಾವಭೇದವನ್ನೂ ಕಲ್ಪಿಸಲಾಗಿಲ್ಲ ಆದರೆ, ೬ ನೆಯ ಕಲಮಿನ ಪರಿಮಿತಿ ಅನ್ವಯಿಸುವಾಗ ಬೇರೆಯಾದ ಮಗನು ಪರಿಮಿತಿಯಲ್ಲಿ ನಿರ್ದಿಷ್ಟರಾದ ಸ್ತ್ರೀ ವಾರಸದಾರರೊಡನೆ ವಾರಸಾ ಪಡೆಯಲಾರನು. ಮೃತನು ಜೀವಂತವಿರುವಾಗ ಗರ್ಭರೂಪದಲ್ಲಿದ್ದು,ಆತನ ಮರಣದ ನಂತರ ಜನಸಿದ ಮಗನೂ ಮೃತನ ವಾರಸದಾರನಾಗುತ್ತಾನೆ.

ಮೃತನ ಮಲಮಗ–ಎಂದರೆ ತನ್ನಹೆಂಡತಿಗೆ ಬೇರೊಬ್ಬ ಪತಿಯಿಂದ ಹುಟ್ಟಿದ ಮಗ–ಆತನ ಮಗನೆನಿಸಲಾರನು. ಕಾರಣ ಆತನಿಗೆ ೮ನೆಯ ಕಲಮಿನ ವಾರಸಾ ಸಲ್ಲದು. ಮೃತನ ಅನೌರಸ ಪುತ್ರನಾದರೂ ಆತನ ಪುತ್ರನೆಂದು ವಾರಸಾ ಪಡೆಯಲಾರನು. ಈ ಕಾಯ್ದೆಯ ೩ನೆಯ ಕಲಮಿನನ್ವಯ ಅನೌರಸ ಪುತ್ರನು ತನ್ನ ಪ್ರತೀತ ತಂದೆ (Putative Father)ಯ ವಾರಸದಾರನಾಗಲಾರನು. ಪೂರ್ವದ ಹಿಂದೂ ಕಾನೂನಿನಲ್ಲಿ ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯ ವರ್ಣಗಳಲ್ಲಿ ಅನೌರಸ ಪುತ್ರರು ದಾಯವ್ಯಾವರ್ತಿತರೆನಿಸುತ್ತಿದ್ದರೂ, ಶೂದ್ರರಲ್ಲಿ ಅನೌರಸ ಪುತ್ರರಿಗೆ ಕೆಲಸಂದರ್ಭಗಳಲ್ಲಿ ಪ್ರತೀತ ತಂದೆಯ ವಾರಸಾ ಸಲ್ಲುತ್ತಿತ್ತು.

ವಿಶೇಷ ವಿವಾಹ ಕಾಯ್ದೆ (೧೯೫೪) ಯನ್ವಯ ವಿವಾಹಿತನಾದ ಮಗನು ತನ್ನತಂದೆಯ ಆಸ್ತಿಗೆ ಹಿಂದೂಪುತ್ರನಂತೆ ವಾರಸದಾರನಾಗುವ ಹಕ್ಕನ್ನು ಕಳೆದುಕೊಳ್ಳುವದಿಲ್ಲ, (ಗಿರ್ಧಾರಿಲಾಲ ವಿ. ಫತೇಚಂದ AIR 1955 M.B.148).

## ೬೯ ಮಗಳು

ಮಗಳೆಂದರೆ ಔರಸ ಮಗಳೆಂದು ಮಾತ್ರ ಅರ್ಥ. ಅವಳು ೧ನೆಯ ವರ್ಗದ

ಮಗ, ವಿಧವೆ ಮೊದಲಾದ ವಾಸಸದಾರರೊಡನೆ ಏಕಕಾಲದಲ್ಲೇ ವಾರಸಾ ಪಡೆ ಯುತ್ತಾಳೆ. ಅವಳಿಗೆ ತಂದೆಯ ಮಿತಾಕ್ಷರ ಸಮಾಯಿಕ ಆಸ್ತಿಯಲ್ಲಿನ ಬಾಧ್ಯ ತೆಯಲ್ಲಿಯೂ ಪಾಲುಸಿಕ್ಕುತ್ತದೆ. ಅವಳಿಗೆ ದೊರೆಯುವ ಆಸ್ತಿ ಯಾವಾಗಲೂ ಸ್ವತಂತ್ರ ಆಸ್ತಿಯಾಗಿರುತ್ತದೆ, (ಕ ೧೪). ಹೆಣ್ಣುಮಕ್ಕಳ ಆರ್ಥಿಕಸ್ಥಿತಿ ನೀತಿಮತ್ತೆ ಅಥವಾ ಮದುವೆಯನ್ನವಲಂಬಿಸಿದ ಯಾವ ಅನರ್ಹತೆಗಳನ್ನೂ ಈ ಕಾಯ್ದೆ ಅಂಗೀ ಕರಿಸುವದಿಲ್ಲ.

## ೭೦ ವಿಧವೆ

ವಿಧವೆಯೆಂದರೆ ಮೃತನ ಮರಣಕಾಲದಲ್ಲಿ ಆತನ ಕಾನೂನುಬದ್ಧ ಪತ್ನಿಯಾ ಗಿದ್ದವಳು. ಮೃತನು ಮರಣ ಪೂರ್ವದಲ್ಲಿ ಅವಳನ್ನು ವಿವಾಹವಿಚ್ಛೇದನ ಮೂಲಕ ಬಿಟ್ಟಿದ್ದರೆ, ಅಂಥವಳು ಆತನ ವಿಧವೆಯೆನಿಸಲಾರಳು. ಕೋರ್ಟ ಡಿಕ್ರಿಯ ಮೂಲಕ ಬೇರೆ ವಾಸಿಸುತ್ತಿರುವವಳು ವಿಧವೆಯೆನಿಸುವಳು. ಕಾರಣವೇನೆಂದರೆ, ಇಂಥ ಸಂದ ರ್ಭದಲ್ಲಿ ವಿವಾಹಸಂಬಂಧ ಮೃತನ ಮರಣದವರೆಗೂ ಅಬಾಧಿತವಾಗಿರುತ್ತದೆ.

ಈ ಕಾಯ್ದೆಯ ೬ನೆಯ ಕಲಮಿನಕೆಳಗೆ ವಿಧವೆಗೆ ಮಿತಾಕ್ಷರ ಸಮಾಯಿಕ ಆಸ್ತಿಯಲ್ಲೂ ಪಾಲುಸಿಗುತ್ತದೆ. ಅವಳ ನೀತಿಬಾಹಿರತೆ ವಾರಸಾಹಕ್ಕಿಗೆ ಆತಂಕ ವಾಗುವದಿಲ್ಲ, (ಕ ೨೮). ಅವಳಿಗೆ ಸಿಕ್ಕುವ ಆಸ್ತಿ ಸ್ವತಂತ್ರ ಆಸ್ತಿಯಾಗಿವೆಯಾದ್ದ ರಿಂದ, ಪುನರ್ವಿವಾಹವಾದರೂ ಅವಳಆಸ್ತಿ ಮೃತನ ಮಿಕ್ಕವಾರಸದಾರರಿಗೆ ಮರಳಿ ಹೋಗಲಾರದು.

## ೭೧ ತಾಯಿ ಮತ್ತು ತಂದೆ

ಈ ಕಾಯ್ದೆಯಲ್ಲಿ ಮೃತನ ತಾಯಿಯನ್ನು ಪುತ್ರ ಹಾಗೂ ಪುತ್ರಿಯರೊಡನೆ ಪರಿಶಿಷ್ಟದ ೧ನೆಯ ವರ್ಗದಲ್ಲಿರಿಸಲಾಗಿದ್ದು, ತಂದೆಯನ್ನುಮಾತ್ರ ೨ನೆಯ ವರ್ಗದ ೧ನೆಯ ಯಾದಿಗೆ ದೂಡಲಾಗಿದೆ. ತಾಯಿಗೆ ತಂದೆಗಿಂತ ಹೆಚ್ಚಿನ ಪ್ರಾಶಸ್ತ್ಯ ಕೊಡುವುದರ ಔಚಿತ್ಯವೇನೆಂದು ಸ್ಪಷ್ಟವಿಲ್ಲ. ಸಾಂಸತ್ತಿಕ ಸಂಯುಕ್ತ ಸಮಿತಿಯ ಅನೇಕ ಸದಸ್ಯರು ಈ ಭೇದ ನ್ಯಾಯವಾದುದಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ.

## ೭೨ ವಿಧವಾ ಸೊಸೆ

ಮೊಟ್ಟ ಮೊದಲು ವಾರಸಾ ಪಡೆಯುವ ಏಕಕಾಲೀನ ವಾರಸದಾರರ ಯಾದಿಯು ಈ ಕಾಯ್ದೆಯಲ್ಲಿ ಪೂರ್ವದ ಆರು ಜನರಿಂದ ಹನ್ನೆರಡು ಜನರಿಗೇರಿದೆ. ಡಾ. ಪಿ. ವಿ. ಕಾಣೆಯವರು ಈ ವಿಸ್ತರಣೆಗೆ ಸಾಮಾನ್ಯವಾಗಿ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಲೇ ಈ ಯಾದಿಯಲ್ಲಿ ವಿಧವಾ ಸೊಸೆಯಂದಿರನ್ನು ಸೇರಿಸಿದುದನ್ನು

ವಿಶೇಷವಾಗಿ ವಿರೋಧಿಸಿದ್ದಾರೆ. ಮಿತಾಕ್ಷರ ಕಾನೂನಿನಲ್ಲಿ ವಿಧವಾ ಸೊಸೆ ಸಗೋತ್ರ ಸಪಿಂಡಳೆಂದು ಪರಿಗಣಿತಳಾಗಿ ಸೀಮಿತ ಆಸ್ತಿ(Limited Estate) ಯನ್ನು ಪಡೆಯುತ್ತಿದ್ದಳು. ಕಾರಣ ಅವಳ ಮರಣಾನಂತರ ಕುಟುಂಬದ ಆಸ್ತಿ ಕುಟುಂಬದ ಸಂಪ್ರದಾಯ ರಕ್ಷಕರಾದ ಪುರುಷ ವಾರಸದಾರರಿಗೇ ಸಲ್ಲುತ್ತಿತ್ತು. ಈಗ ವಿಧವೆಯರು ಸ್ವತಂತ್ರ ಆಸ್ತಿಯನ್ನೇ ಪಡೆಯುವದರಿಂದ ವಿಧವಾ ಸೊಸೆಯರು ಇಂಥ ಆಸ್ತಿಯನ್ನು ತಮ್ಮ ಪುನರ್ವಿವಾಹಿತ ಪತಿಯ ಕುಟುಂಬಕ್ಕೊಯ್ಯುವ ಸಂಭವವಿದೆ. ಪುನರ್ವಿವಾಹದ ಮೂಲಕ ಅವಳಿಗೆ ಪತ್ನಿಯೆಂದು ವಾರಸಾಹಕ್ಕು ಪ್ರಾಪ್ತ ವಾಗುತ್ತದೆ. ಹೀಗಿರುವಾಗ ವಿಧವಾ ಸೊಸೆಯರಿಗೆ ಈ ವಿಧವಾದ ಪ್ರಥಮ ವಾರಸಾಹಕ್ಕು ಕೊಟ್ಟಿರುವುದು ಅಷ್ಟು ನ್ಯಾಯವಲ್ಲವೆಂದು ತೋರುತ್ತದೆ.

## ಕ. ೯

ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಲಾದ ವಾರಸದಾರರಲ್ಲಿ ೧ನೆಯ ವರ್ಗದಲ್ಲಿನವರು, ಉಳಿದೆಲ್ಲ ವಾರಸದಾರರನ್ನು ವ್ಯಾವರ್ತಿಸಿ ಏಕಕಾಲದಲ್ಲಿ ವಾರಸಾ ಪಡೆಯತಕ್ಕದ್ದು; ೨ನೆಯ ವರ್ಗದ ಮೊದಲನೆಯ ಯಾದಿಯಲ್ಲಿನವರಿಗೆ ಎರಡನೆಯ ಯಾದಿಯ ಲ್ಲಿನವರ ಮೇಲೆ ಪ್ರಾಶಸ್ತ್ಯವೀಯತಕ್ಕದ್ದು; ಎರಡನೆಯ ಯಾದಿಯಲ್ಲಿನವರಿಗೆ ಮೂರನೆಯ ಯಾದಿಯಲ್ಲಿನವರ ಮೇಲೆ ಪ್ರಾಶಸ್ತ್ಯವೀಯತಕ್ಕದ್ದು; ಅನುಕ್ರಮವಾಗಿ ಇದೇ ರೀತಿಯಲ್ಲಿ ಪ್ರಾಶಸ್ತ್ಯವೀಯತಕ್ಕದ್ದು.

### ಟೀಕೆ

### ೬೩ ಕಲಮಿನ ಉದ್ದಿಷ್ಟ

ಕೆಳಗಿನ ದೃಷ್ಟಾಂತಗಳಿಂದ ಈ ಕಲಮಿನ ಉದ್ದಿಷ್ಟ ಸ್ಪಷ್ಟವಾಗುತ್ತದೆ.

(೧) ಮೃತನ ನಂತರ, ವಿಧವೆ, ಇಬ್ಬರು ಪುತ್ರರು, ಮೂವರು ಪುತ್ರಿಯರು, ಪೂರ್ವಮೃತ ಪುತ್ರನ ಇಬ್ಬರು ಪುತ್ರರು, ಇನ್ನೊಬ್ಬ ಪೂರ್ವಮೃತ ಪುತ್ರನ ವಿಧವೆ– ಇವರು ಉಳಿದಿದ್ದಾರೆನ್ನುವಾ ಇವರೆಲ್ಲ ೧ನೆಯ ವರ್ಗದಲ್ಲಿನ ವಾರಸದಾರರೇ ಆಗಿರುವುದರಿಂದ ಯಾರು ಯಾರನ್ನೂ ವ್ಯಾವರ್ತಿಸದೆ, ಎಲ್ಲರೂ ಏಕಕಾಲದಲ್ಲಿ ವಾರಸಾ ಪಡೆದು ಮೃತನ ಆಸ್ತಿಯನ್ನು ಕಾಯ್ದೆಗನ್ನಯ ಹಂಚಿಕೊಳ್ಳುತ್ತಾರೆ.

(೨) ಮೃತನ ನಂತರ ಉಳಿದಿರುವ ಸಂಬಂಧಿಕರೆಂದರೆ– ಆತನ ಸೋದರಿ ಹಾಗೂ ತಂದೆಯ ತಂದೆಯೆಂದು ತಿಳಿಯೋಣ. ಸೋದರಿ ೨ ನೆಯ ವರ್ಗದ ಮೊದಲನೆಯ ಯಾದಿಯಲ್ಲಿ ಬರುತ್ತಾಳೆ. ತಂದೆಯ ತಂದೆ ಐದನೆಯ ಯಾದಿಯಲ್ಲಿ ಬರುತ್ತಾನೆ. ಕಾರಣ ಸೋದರಿ ತಂದೆಯ ತಂದೆಯ ಮೇಲೆ ಪ್ರಾಶಸ್ತ್ಯ ಪಡೆದು ಆತನನ್ನು ವ್ಯಾವರ್ತಿಸಿ ಮೃತನ ಆಸ್ತಿಯನ್ನು ಪಡೆಯುತ್ತಾಳೆ.

## ಕ. ೧೦

| | |
|---|---|
| ಪರಿಶಿಷ್ಟದ ೧ನೆಯ ವರ್ಗದ ವಾರಸದಾರರಲ್ಲಿ ಆಸ್ತಿ ವಿಭಜನೆ | ಅಮೃತ್ಯುಲೇಖೀಯನ ಆಸ್ತಿಯು ಪರಿಶಿಷ್ಟದ ೧ನೆಯವರ್ಗದಲ್ಲಿನ ವಾರಸದಾರರಲ್ಲಿ ಕೆಳಗಿನ ನಿಯಮಗಳಿಗನುಸಾರವಾಗಿ ವಿಭಕ್ತವಾಗತಕ್ಕದ್ದು:– |

**ನಿಯಮ ೧**—ಅಮೃತ್ಯುಲೇಖೀಯನಿಗೆ ವಿಧವೆಯು, ಅಥವಾ ಒಬ್ಬಳಿಗಿಂತ ಹೆಚ್ಚು ವಿಧವೆಯರಿದ್ದರೆ, ಎಲ್ಲವಿಧವೆಯರೂಕೂಡಿ, ಒಂದು ಪಾಲು ತೆಗೆದುಕೊಳ್ಳತಕ್ಕದ್ದು.

**ನಿಯಮ ೨**—ಅಮೃತ್ಯುಲೇಖೀಯನ ಜೀವಂತರಾಗಿರುವ ಪುತ್ರರು, ಪುತ್ರಿಯರು ಮತ್ತು ಆತನ ತಾಯಿ–ಪ್ರತಿಯೊಬ್ಬರಿಗೂ ಒಂದೊಂದರಂತೆ ಪಾಲು ತೆಗೆದುಕೊಳ್ಳತಕ್ಕದ್ದು.

**ನಿಯಮ ೩**—ಅಮೃತ್ಯುಲೇಖೀಯನ ಪೂರ್ವಮೃತ ಪುತ್ರನ ಅಥವಾ ಪೂರ್ವಮೃತ ಪುತ್ರಿಯ ಶಾಖೆಯ ವಾರಸದಾರರು ಎಲ್ಲರನಡುವೆ ಒಂದುಪಾಲು ತೆಗೆದುಕೊಳ್ಳತಕ್ಕದ್ದು.

**ನಿಯಮ ೪**—ನಿಯಮ ೩ ರಲ್ಲಿ ನಿರ್ದೇಶಿಸಿದ ಪಾಲಿನ ಹಂಚಿಕೆ:–

೧ ಪೂರ್ವಮೃತ ಪುತ್ರನ ಶಾಖೆಯಲ್ಲಿನ ವಾರಸದಾರರಲ್ಲಿ, ಆತನ ವಿಧವೆ [ಹೆಚ್ಚು ವಿಧವೆಯರಿದ್ದರೆ ಅವರೆಲ್ಲರಿಗೆಕೂಡಿ] ಜೀವಂತ ಪುತ್ರರು ಮತ್ತು ಜೀವಂತ ಪುತ್ರಿಯರು ಸಮನಾದ ಭಾಗಗಳನ್ನು ಪಡೆಯುವಂತೆಯೂ, ಆತನ ಪೂರ್ವಮೃತ ಪುತ್ರನ

ಶಾಖೆಗೂ ಅಷ್ಟೇಭಾಗ ದೊರೆಯುವಂತೆಯೂ ಆಸ್ತಿಯನ್ನು ಹಂಚತಕ್ಕದ್ದು;

೨ ಪೂರ್ವಮೃತ ಪುತ್ರಿಯ ಶಾಖೆಯಲ್ಲಿನ ವಾರಸದಾರರಲ್ಲಿ, ಅವಳ ಜೀವಂತ ಪುತ್ರರು ಹಾಗೂ ಪುತ್ರಿಯರು ಸಮನಾದ ಭಾಗಗಳನ್ನು ಪಡೆಯುವಂತೆ, ಆಸ್ತಿಯನ್ನು ಹಂಚತಕ್ಕದ್ದು.

## ಟೀಕೆ

### ೭೪ ಆಸ್ತಿಯ ಹಂಚಿಕೆಯ ವಿಧಾನ

೧೦ ನೆಯ ಕಲಮಿಗನುಸಾರ ಮೃತನ ಆಸ್ತಿಯು ಹೇಗೆ ಪಾಲುಗೊಳ್ಳುವದೆಂಬುದು ಕೆಳಗಿನ ಉದಾಹರಣೆಗಳಿಂದ ಸ್ಪಷ್ಟವಗುತ್ತದೆ:

(೧) ಅಮೃತ್ಯಲೇಖೀಯನು ತನ್ನ ಹಿಂದೆ ಅ,ಬ,ಕ,ಎಂಬ ಮೂರುಜನ ಜೀವಂತ ಪುತ್ರರನ್ನೂ, ಡ ಮತ್ತು ಈ ಎಂಬಿಬ್ಬರು ಮೊದಲೇ ಮೃತರಾದ ಪುತ್ರರಿಂದ ತಲಾ ಇಬ್ಬರಂತೆ ನಾಲ್ಕುಜನ ಪೌತ್ರ (ಮೊಮ್ಮಕ್ಕಳು) ರನ್ನೂ ಬಿಟ್ಟು ಮೃತನಾದರೆಂದು ತಿಳಿಯೋಣ. ಈ ಕಲಮಿನ ನಿಯಮ (೨) ಕ್ಕನುಸಾರವಾಗಿ, ಅ, ಬ ಮತ್ತು ಕ ಈ ಮೂವರಿಗೆ ತಲಾ ಒಂದು ಪಾಲು ಆಸ್ತಿಯಲ್ಲಿ ಸಿಕ್ಕುತ್ತದೆ. ನಿಯಮ (೩) ಕ್ಕನುಸಾರವಾಗಿ ಪೂರ್ವಮೃತ ಪುತ್ರರಾದ ಡ ಮತ್ತು ಈ ಇವರಿಬ್ಬರಿಗೆ ಶಾಖೆಗೊಂದರಂತೆ ಎರಡುಪಾಲು ಹೋಗುತ್ತದೆ. 'ಡ' ನ ಪುತ್ರರಿಬ್ಬರು ತಮ್ಮ ತಂದೆಯಪಾಲನ್ನೂ, 'ಈ' ನ ಪುತ್ರರಿಬ್ಬರು ತಮ್ಮ ತಂದೆಯ ಪಾಲನ್ನೂ ಹಂಚಿಕೊಳ್ಳುತ್ತಾರೆ. ಕಾರಣ, ಮೃತನ ಪ್ರತಿಯೊಬ್ಬ ಜೀವಂತ ಮಗನಿಗೆ ಆಸ್ತಿಯ ೧/೫ ಭಾಗವೂ, ಪ್ರತಿಯೊಬ್ಬ ಜೀವಂತ ಮೊಮ್ಮಗ (ಪೌತ್ರ) ನಿಗೆ ಆಸ್ತಿಯ ೧/೧೦ ಭಾಗವೂ ಸಿಕ್ಕುತ್ತದೆ.

೨) ಅಮೃತ್ಯಲೇಖೀಯನಿಗೆ ಆತನ ತಾಯಿ ಮತ್ತು ಆತನಿಗಿಂತ ಮೊದಲೇ ಸತ್ತ ಮಗನೊಬ್ಬನ ಇಬ್ಬರು ಪುತ್ರರು ವಾರಸದಾರರಾಗಿದ್ದಾರೆ. ನಿಯಮ (೧) ಕ್ಕನುಸಾರ ತಾಯಿಗೆ ಒಂದುಪಾಲು ಸಿಕ್ಕುತ್ತದೆ. ನಿಯಮ (೩) ಕ್ಕನುಸಾರ ಇಬ್ಬರೂ ಮೊಮ್ಮಕ್ಕಳಿಗೆ ಕೂಡಿ ಒಂದುಪಾಲು ಸಿಕ್ಕುತ್ತದೆ ಕಾರಣ ತಾಯಿಗೆ ಆಸ್ತಿಯ ಅರ್ಧಭಾಗವೂ, ಪ್ರತಿಯೊಬ್ಬ ಮೊಮ್ಮಗನಿಗೆ ಆಸ್ತಿಯ ಕಾಲುಭಾಗವೂ ದೊರೆಯುತ್ತದೆ.

(೩) ಒಬ್ಬ ವಿಧವೆ, ಇಬ್ಬರು ಪುತ್ರಿಯರು, ಮತ್ತು ಮೊದಲೇ ಸತ್ತ ಪುತ್ರಿಯೊಬ್ಬಳ ಇಬ್ಬರು ಮಕ್ಕಳು ಅಮೃತ್ಯುಲೇಖೀಯನ ವಾರಸದಾರರಾಗಿದ್ದಾರೆ. ನಿಯಮ ೧) ರನ್ವಯ ವಿಧವೆಗೆ ಒಂದುಪಾಲು ಸಿಕ್ಕುತ್ತದೆ. ನಿಯಮ (೩)ಕ್ಕನುಸಾರ ಪ್ರತಿಯೊಬ್ಬ ಪುತ್ರಿಗೆ ಒಂದೊಂದುಪಾಲು ದೊರೆಯತಕ್ಕದ್ದು. ಪೂರ್ವಮೃತ ಪುತ್ರಿಯ ಮಕ್ಕಳಿಬ್ಬರೂಕೂಡಿ ತಮ್ಮ ತಾಯಿಯ ಒಂದುಪಾಲನ್ನು ಪಡೆಯುತ್ತಾರೆ. ಆಸ್ತಿಯಲ್ಲಿ ಒಟ್ಟು ನಾಲ್ಕು ಪಾಲಾಗಬೇಕೆಂದಾಯಿತು. ಕಾರಣ ವಿಧವೆಗೆ ಆಸ್ತಿಯ ಕಾಲುಭಾಗವೂ, ಪ್ರತಿಯೊಬ್ಬ ಜೀವಂತ ಮಗಳಿಗೆ ಕಾಲುಭಾಗವೂ, ಮತ್ತು ಪ್ರತಿಯೊಬ್ಬ ಪೂರ್ವಮೃತ ಪುತ್ರಿಯ ಮಗುವಿಗೆ ⅛ ಭಾಗವೂ ಸಲ್ಲುತ್ತದೆ.

(೪) ಮೃತನ ನಂತರ ಆತನ ಒಬ್ಬ ಮಗಳು ಮತ್ತು ಆತನ ಪೂರ್ವಮೃತ ಪುತ್ರನ ಇಬ್ಬರು ವಿಧವೆಯರು—ಹೀಗೆ ವಾರಸದಾರರಿದ್ದಾರೆ. ನಿಯಮ(೨)ಕ್ಕನುಸಾರ ಮಗಳಿಗೆ ಒಂದುಪಾಲು ಸಲ್ಲುತ್ತದೆ. ಇಬ್ಬರು ವಿಧವೆಯರಿಗೆ ಕೂಡಿ ಒಂದು ಪಾಲು ಸಲ್ಲುತ್ತದೆ. ಎಂದರೆ ಮಗಳಿಗೆ ಆಸ್ತಿಯ ಅರ್ಧ ಭಾಗವೂ ಉಳಿದ ಅರ್ಧ ಇಬ್ಬರೂ ವಿಧವೆಯರಿಗೂ ಸಿಗುತ್ತದೆ

೫) ಮೃತನ ನಂತರ ಆತನ ಒಬ್ಬ ಪುತ್ರ, ಒಬ್ಬ ಪುತ್ರಿ ಮತ್ತು ಪೂರ್ವಮೃತ ಪುತ್ರನೊಬ್ಬನ ವಿಧವೆ ಹಾಗೂ ಪುತ್ರ ಉಳಿದಿದ್ದಾರೆಂದು ಕಲ್ಪಿಸೋಣ. ನಿಯಮ (೨)ಕ್ಕನುಸಾರ ಪುತ್ರ ಹಾಗೂ ಪುತ್ರಿ ಒಂದೊಂದುಪಾಲು ಪಡೆಯತಕ್ಕದ್ದು. ನಿಯಮ ೪ (೧)ರನ್ವಯ ಪೂರ್ವ ಮೃತ ಪುತ್ರನ ವಿಧವೆ ಹಾಗೂ ಮಗ ಇವರಿಬ್ಬರಿಗೂ ಕೂಡಿ ಒಂದು ಪಾಲು ಸಿಗುತ್ತಿದ್ದು ಅದನ್ನವರು ಸಮವಾಗಿ ಹಂಚಿಕೊಳ್ಳತಕ್ಕದ್ದು. ಅರ್ಥಾತ್ ಪುತ್ರನು ⅓ ಭಾಗವನ್ನೂ ಪುತ್ರಿಯು ⅓ ಭಾಗವನ್ನೂ ಪೂರ್ವ ಮೃತ ಪುತ್ರನ ವಿಧವೆ ⅙ ಭಾಗವನ್ನೂ ಮತ್ತು ಆತನ ಪುತ್ರ ⅙ ಭಾಗವನ್ನೂ ಮೃತನ ಆಸ್ತಿಯಲ್ಲಿ ಪಡೆಯುತ್ತಾರೆ.

೬) ಮೃತನ ನಂತರ ಒಬ್ಬ ಪೂರ್ವ ಮೃತ ಪುತ್ರನ ಮಗ, ಪೂರ್ವ ಮೃತ ಪುತ್ರಿಯೊಬ್ಬಳ ಇಬ್ಬರು ಪುತ್ರರು, ಪೂರ್ವ ಮೃತನಾದ ಇನ್ನೊಬ್ಬ ಪುತ್ರನ ಇಬ್ಬರು ಪುತ್ರಿಯರು ಉಳಿದಿದ್ದಾರೆ. ನಿಯಮ (೩)ಕ್ಕನುಸಾರ ಮೃತನ ಆಸ್ತಿಯಲ್ಲಿ ಪೂರ್ವ ಮೃತ ಪುತ್ರನೊಬ್ಬನ ಪುತ್ರನಿಗೆ ಒಂದು ಪಾಲು ದೊರೆಯತಕ್ಕದ್ದು. ನಿಯಮ ೪ ೧)ರನ್ವಯ ಪೂರ್ವ ಮೃತ ಪುತ್ರಿಯ ಇಬ್ಬರೂ ಪುತ್ರರು ಕೂಡಿ ಒಂದುಪಾಲು ಪಡೆದು ಅದನ್ನು ತಮ್ಮಲ್ಲಿ ಸಮನಾಗಿ ಹಂಚಿ ಕೊಳ್ಳತಕ್ಕದ್ದು. ಅದೇ ನಿಯಮಕ್ಕನುಸಾರವಾಗಿ ಪೂರ್ವ ಮೃತ ಪುತ್ರನ ಇಬ್ಬರು ಪುತ್ರಿಯರಾದರೂ ಇಬ್ಬರೂ ಕೂಡಿ

ಒಂದು ಪಾಲುಪಡೆದು ಅದನ್ನು ತಮ್ಮಲ್ಲಿ ಸಮನಾಗಿ ಹಂಚಿಕೊಳ್ಳತಕ್ಕದ್ದು. ಅರ್ಥಾತ್ ೧/೩, ೧/೬, ೧/೬, ೧/೬, ೧/೬. ಈ ಪ್ರಮಾಣದಲ್ಲಿ ಮೃತನ ಆಸ್ತಿಯು ವಾರಸದಾರರಲ್ಲಿ ಹಂಚಿ ಹೋಗುತ್ತದೆ.

(೭) ಮೃತನ ನಂತರ ಒಬ್ಬಳೇ ವಿಧವೆ, ಇಲ್ಲವೆ ಒಬ್ಬಳೇ ಮಗಳ ಮಗಳು ಅಥವಾ ಒಬ್ಬನೇ ಮಗಳ ಮಗ, ಅಥವಾ ಮಗನ ಮಗಳು ವಾರಸದಾರರಾಗಿ ಉಳಿದರೆಂದು ತಿಳಿದರೆ–ಅಂಥ ವಾರಸದಾರರಿಗೆ ಮೃತನ ಯಾವತ್ತೂ ಆಸ್ತಿ ಸಲ್ಲುತ್ತವೆ.

## ೧೧

**ಪರಿಶಿಷ್ಟದ ೨ನೆಯ ವರ್ಗದ ವಾರಸದಾರರಲ್ಲಿ ಆಸ್ತಿ ವಿಭಜನೆ.**

ಪರಿಶಿಷ್ಟದ ೨ನೆಯ ವರ್ಗದ ಯಾವುದೇ ಒಂದು ಯಾದಿಯಲ್ಲಿ ನಿರ್ದಿಷ್ಟರಾದ ವಾರಸದಾರರ ನಡುವೆ ಅಮೃತ್ಯುಲೇಖೀಯನ ಆಸ್ತಿಯು ಅವರೆಲ್ಲರಿಗೂ ಸಮ ಪಾಲು ಸಿಗುವಂತೆ ವಿಭಕ್ತವಾಗತಕ್ಕದ್ದು.

### ಟೀಕೆ

### ೨೫ ಎರಡನೇ ವರ್ಗದ ವಾರಸದಾರರು

ಪರಿಶಿಷ್ಟದ ೨ ನೆಯ ವರ್ಗದ ವಾರಸದಾರರು, ೧ ನೆಯ ವರ್ಗದ ಒಬ್ಬ ವಾರಸದಾರರೂ ಇಲ್ಲದಿದ್ದಾಗ ಮಾತ್ರ ಮೃತನ ಆಸ್ತಿಯಲ್ಲಿ ಪಾಲುಪಡೆಯ ಬಲ್ಲರು. ಈ ವಾರಸದಾರರನ್ನು ೯ ಗುಂಪುಗಳಾಗಿ ವಿಭಾಗಿಸಿ ಒಂಭತ್ತು ಯಾದಿಗಳಲ್ಲಿ ಅನುಕ್ರಮವಾಗಿ ನಿರ್ದಿಷ್ಟಪಡಿಸಲಾಗಿದೆ. ಯಾದಿಯ ಕ್ರಮಾಂಕಕ್ಕನುಸಾರವೇ ವಾರಸಾಪ್ರಾಪ್ತಿಯ ಪ್ರಾಶಸ್ತ್ಯದ ಕ್ರಮವುಂಟು. ಮೊದಲಿನ ಯಾದಿಯ ವಾರಸದಾರರು ಮುಂದಿನ ಯಾದಿಯ ವಾರಸದಾರರನ್ನು ವ್ಯಾವರ್ತಿಸುತ್ತಾರೆ.

ಒಂದೇ ಯಾದಿಯಲ್ಲಿ ಬರುವ ವಾರಸದಾರರಿಗೆ ಸಮಪಾಲು ಸಿಗುವಂತೆ ಆಸ್ತಿಯನ್ನು ಹಂಚತಕ್ಕದ್ದೆಂದು ಈ ಕಲಮು ವಿಧಿಸುತ್ತದೆ. ಕೆಳಗಿನ ಉದಾಹರಣೆ ಈ ಕಲಮಿನ ಉದ್ದಿಷ್ಟವನ್ನು ವಿಶದೀಕರಿಸುತ್ತದೆ:

ಅಮೃತ್ಯುಲೇಖೀಯನ ಜೀವಂತ ಸಂಬಂಧಿಕರು:

(ಅ) ಅಣ್ಣನಮಗ, ತಂಗಿಯಮಗ, ತಮ್ಮನಮಗಳು, ಅಕ್ಕನ ಮಗಳು;

ಮತ್ತು (ಬ) ಸೋದರತ್ತೆ ಇವರಾಗಿದ್ದಾರೆ. (ಅ) ಗುಂಪಿನ ವಾರಸದಾರರು ಪರಿಶಿಷ್ಟದ ೨ ನೆಯ ವರ್ಗದ ೪ನೆಯ ಯಾದಿಯಲ್ಲಿ ನಿರ್ದಿಷ್ಟರಾಗಿದ್ದು, ಸೋದರತ್ತೆಯು ಅದೇ ವರ್ಗದ ೭ ನೆಯ ಯಾದಿಯಲ್ಲಿ ನಿರ್ದಿಷ್ಟಳಾಗಿದ್ದಾಳೆ; (ಅ) ಗುಂಪಿನ ವಾರಸದಾರರಿಗೆ ಪ್ರಾಶಸ್ತ್ಯ ಸಿಕ್ಕುತ್ತದೆ. ಅವರೆಲ್ಲರೂ ಅವ್ಯೃತ್ಯುಲೇಖೀಯನ ಆಸ್ತಿಯನ್ನು ಏಕಕಾಲದಲ್ಲಿ ತಮ್ಮ ತಮ್ಮಲ್ಲಿ ಸಮಪಾಲು ಬರುವಂತೆ ವಿಭಾಗಿಸಿಕೊಳ್ಳುತ್ತಾರೆ. ಅರ್ಥಾತ್ ಅದರಲ್ಲಿ ಪ್ರತಿಯೊಬ್ಬನಿಗೆ ಮೃತನ ಆಸ್ತಿಯ ಕಾಲುಭಾಗ ಸಿಗುತ್ತದೆ.

## ಕ. ೧೨

| | |
|---|---|
| ಗಂಡುವಳಿಗರು ಮತ್ತು ಹೆಣ್ಣುವಳಿಗರಲ್ಲಿ ವಾರಸಾ ಕ್ರಮವು | ಗಂಡುವಳಿಗರು ಮತ್ತು ಹೆಣ್ಣುವಳಿಗರಲ್ಲಿಯ ವಾರಸಾದ ಕ್ರಮವನ್ನು, ಕೆಳಗೆ ವಿಧಿಸಿದ ಪ್ರಾಶಸ್ತ್ಯ ನಿಯಮಗಳಿಗನುಗುಣವಾಗಿ ಸಂದರ್ಭಾನುಸಾರ ನಿರ್ಧರಿಸತಕ್ಕದ್ದು :— |

**ನಿಯಮ ೧**—ಇಬ್ಬರು ವಾರಸದಾರರಲ್ಲಿ, ವಂಶಾಗ್ರಕ್ರಮ (Ascent) ದಲ್ಲಿ ಕಡಿಮೆ ಶ್ರೇಣಿ (Degree) ಗಳಿರುವ ಅಥವಾ ವಂಶಾಗ್ರಕ್ರಮ ಶ್ರೇಣಿಗಳೇ (Deg ees of Ascent) ಇಲ್ಲದಿರುವ ವಾರಸದಾರನಿಗೆ ಪ್ರಾಶಸ್ತ್ಯವೀಯತಕ್ಕದ್ದು.

**ನಿಯಮ ೨**—ವಂಶಾಗ್ರಕ್ರಮ ಶ್ರೇಣಿಗಳು ಸಮಾನವಾಗಿರುವಾಗ, ಅಥವಾ ಅವಿಲ್ಲದಿರುವಾಗ, ವಂಶಾನುಕ್ರಮ (Descent) ದಲ್ಲಿ ಕಡಿಮೆ ಶ್ರೇಣಿಗಳಿರುವ ಅಥವಾ ವಂಶಾನುಕ್ರಮ ಶ್ರೇಣಿಗಳೇ—(Degrees of Descent) ಇಲ್ಲದಿರುವ ವಾರಸದಾರನಿಗೆ ಪ್ರಾಶಸ್ತ್ಯವೀಯತಕ್ಕದ್ದು.

**ನಿಯಮ ೩**—ನಿಯಮ [೧] ಮತ್ತು ನಿಯಮ [೨] ರನ್ವಯ ಯಾವನೊಬ್ಬ ವಾರಸದಾರನಿಗೂ ಪ್ರಾಶಸ್ತ್ಯ ದೊರೆಯದಂತಿದ್ದರೆ, ಇಬ್ಬರೂ ಏಕಕಾಲದಲ್ಲಿ ವಾರಸಾ ಪಡೆಯುತ್ತಾರೆ.

## ಟೀಕೆ

### ೭೬ ವ್ಯಾಪ್ತಿ

ಈ ಕಲಮಿನಲ್ಲಿ ಗಂಡುವಳಿಗರು ಅಥವಾ ಹೆಣ್ಣುವಳಿಗರಲ್ಲಿ ಪರಸ್ಪರ ಪ್ರಾಶಸ್ತ್ಯ ಹೇಗೆ ನಿರ್ಧಾರವಾಗತಕ್ಕದ್ದೆಂಬುದನ್ನು ವಿಧಿಸಲಾಗಿದೆ. ಈ ಕಲಮಿನ ಪ್ರಾಶಸ್ತ್ಯ ಕ್ರಮ ನಿಯಮಗಳಿಂದ ಮಿತಾಕ್ಷರ, ದಾಯಭಾಗ ಅಥವಾ ಇನ್ನಿತರ ರೂಢಿಗತ ಪ್ರಾಶಸ್ತ್ಯಕ್ರಮ ನಿಯಮಗಳು ರದ್ದಾಗುತ್ತವೆ. ಮಿತಾಕ್ಷರದಲ್ಲಿ ರಕ್ತಸಾಮೀಪ್ಯವೂ, ದಾಯಭಾಗದಲ್ಲಿ ಪಿಂಡದಾನಾಧಿಕಾರವೂ ಪ್ರಾಶಸ್ತ್ಯದ ತಳಹದಿಯಾಗಿದ್ದವು. ಮರು ಮಕ್ಕತ್ತಾಯಂ ಮೊದಲಾದ ಮಾತೃಪ್ರಧಾನ ಕಾನೂನುಗಳಲ್ಲಿ ಲಿಂಗ ಅಥವಾ ಹೆಣ್ಣು ವಳಿ ಸಂಬಂಧ ಮಹತ್ವದವೆನಿಸುತ್ತಿದ್ದವು ಈ ಕಾಯ್ದೆಯಲ್ಲಿ ಇವನ್ನೆಲ್ಲ ತ್ಯಜಿಸಿ ಹೊಸದೊಂದು ಪ್ರಾಶಸ್ತ್ಯಕ್ರಮವನ್ನೇ ವಿಧಿಸಿದ್ದು ಆ ಕ್ರಮಕ್ಕೆ ಈ ಕಾಯ್ದೆಯ ಕಲಮುಗಳೇ ತಳಹದಿ.

### ೭೭ ವಂಶಾಗ್ರ ಹಾಗೂ ವಂಶಾನುಕ್ರಮಗಳು

ಈ ಕಲಮಿನ ಪ್ರಾಶಸ್ತ್ಯಕ್ರಮ ನಿರ್ಧಾರಕ್ಕಾಗಿ ಮೃತನೊಡನೆ ಆತನ ಸಂಬಂಧಿಕರ ಸಂಬಂಧಿಕತೆಯನ್ನು ಗುರುತಿಸುವ ಈ ಕಲಮಿನ ವಿಶಿಷ್ಟ ರೀತಿಯನ್ನು ಅರ್ಥ ಮಾಡಿಕೊಳ್ಳಬೇಕು. ವಂಶಾಗ್ರಕ್ರಮದಲ್ಲಾಗಲಿ, ವಂಶಾನುಕ್ರಮದಲ್ಲಾಗಲಿ, ಮೃತನಿಂದ ವಾರಸದಾರನು ಎಷ್ಟುದೂರದ ಸಂಬಂಧಿಕನೆಂದು ಅರಿತುಕೊಳ್ಳಲು, ಆತನು ಮೃತನಿಂದ ಎಷ್ಟು ತಲೆಮಾರಿನವನೆಂದು ತಿಳಿದುಕೊಳ್ಳಬೇಕಾಗುವದು. ಮೃತನಿಂದ ಆತನ ತಂದೆ, ಅಜ್ಜ ಮೊದಲಾದವರು ವಂಶಾಗ್ರಕ್ರಮ (Line of Ascent) ದಲ್ಲಿ ಬರುತ್ತಾರೆ. ಮೃತನ ಮಗ ಮೊಮ್ಮಗ, ಮರಿಮಗ ಮೊದಲಾದವರು ವಂಶಾನುಕ್ರಮ [Line of Descent) ದಲ್ಲಿ ಬರುತ್ತಾರೆ.




ಬದಿಯ ಆಕೃತಿಯಲ್ಲಿ ನೋಡಿ– ತಂದೆ ಮತ್ತು ಅಜ್ಜ ಮೃತನ ಮೇಲ್ಗಡೆಯ ತಲೆಮಾರಿನಲ್ಲಿ ಬರುತ್ತಾರೆ. ಅವರು ಆತನ ಅಗ್ರವಂಶಿಕ (Ascendants) ರು. ಅವರಿಬ್ಬರೂ ಮೃತನಿಂದ ನೇರವಾದ ವಳಿಯ ವಂಶಿಕರಾದ್ದರಿಂದ ಅವರನ್ನೂ ಸ್ವಯಾಗ್ರವಂಶಿಕರೆಂದು ಕರೆಯಲಾಗುವದು. ಅದೇರೀತಿ ಮಗ ಮತ್ತು ಮೊಮ್ಮಗ ಸ್ವಯಾನುವಂಶಿಕರು (Descendants). ಮೃತನ ಅಣ್ಣ ಮತ್ತು ಅಣ್ಣನಮಗ ಮೃತನಿಗೆ ತಂದೆಯ ಮೂಲಕ ಸಂಬಂಧಿಕರೆನಿಸುತ್ತಾರೆ. ತಂದೆ ಅಗ್ರವಂಶಿಕ. ಅವನಿಂದ

ಮೃತನ ಅಣ್ಣ ಮತ್ತು ಆತನ ಮಗ ಅನುವಂಶಿಕರು. ಎಂದರೆ ಅವರು ಮೃತನಿಗೆ ನೇರವಳಿಯಲ್ಲಿ ಸಂಬಂಧಿಕರಲ್ಲ. ಕಾರಣ ಅವರನ್ನು ಸಹವಂಶಿಕ (Col aterals) ರೆಂದು ಕರೆಯಲಾಗುತ್ತದೆ. ಅನೇ ರೀತಿಯಾಗಿ ಕಕ್ಕ ಹಾಗೂ ಆತನ ಮಗನೂ ಮೃತನ ಸಹವಂಶಿಕರಾಗುತ್ತಾರೆ.

ಮೃತನಿಗೆ ಇಬ್ಬರು ಅಥವಾ ಹೆಚ್ಚು ಸಂಬಂಧಿಕರಲ್ಲಿ ಯಾರೂ ಸಮೀಪಸ್ಥ ರೆಂದು ಗುರುತಿಸಲು ಸಂಬಂಧವನ್ನು ಶ್ರೇಣಿ (Degree) ಗಳಲ್ಲಿ ಎಣಿಸತಕ್ಕದ್ದೆಂದು ಕ. ೧೧ ವಿಧಿಸುತ್ತದೆ. ವಂಶಾಗ್ರಕ್ರಮದಲ್ಲಿಯಾಗಲಿ, ವಂಶಾನುಕ್ರಮದಲ್ಲಿಯಾಗಲಿ, ಒಂದು ತಲೆಮಾರೆಂದರೆ, ಒಂದು ಶ್ರೇಣಿ ಎನಿಸುತ್ತದೆ. ಮೃತನದು ಮೊದಲನೇಯ ಶ್ರೇಣಿ, ಆತನತಂದೆ ದ್ವಿತಿಯ ಶ್ರೇಣಿ; ತಂದೆಯತಂದೆ ತೃತೀಯಶ್ರೇಣಿ- ಇತ್ಯಾದಿ.

ಸಹವಂಶಕ್ರಮ (Collateral line) ದಲ್ಲಿ ಮೊದಲು ವಂಶಾಗ್ರಕ್ರಮ ಶ್ರೇಣಿ ಗಳನ್ನೆಣಿಸಿ, ನಂತರ ವಂಶಾನುಕ್ರಮ ಶ್ರೇಣಿಗಳನ್ನೆಣಿಸತಕ್ಕದ್ದು. ಉದಾಹರಣೆಗೆ ಮೇಲಿನ ಆಕೃತಿಯಲ್ಲಿ ಕಕ್ಕನಮಗನಿಗೆ ಮೃತನಿಂದ ವಂಶಾಗ್ರಕ್ರಮದಲ್ಲಿ ಮೂರು ಶ್ರೇಣಿಗಳಿದ್ದು, ವಂಶಾನುಕ್ರಮದಲ್ಲಿ ಎರಡು ಶ್ರೇಣಿಗಳಿವೆ ಕಾರಣ ಆತನು ಮೃತ ನಿಂದ ಐದನೆಯ ಶ್ರೇಣಿಯ ಸಂಬಂಧಿಕನಾಗುತ್ತಾನೆ. ಹಾಗೆಯೇ ಅಣ್ಣನ ಮಗ ನಾಲ್ಕನೆಯ ಶ್ರೇಣಿಯ ಸಂಬಂಧಿಕನಾಗುತ್ತಾನೆ.

ಕೆಳಗಿನ ಕೆಲವು ದೃಷ್ಟಾಂತಗಳಿಂದ ಈ ಕಲಮಿನ ಪ್ರಾಶಸ್ತ್ಯಕ್ರಮ ಸ್ಪಷ್ಟ ವಾಗುತ್ತದೆ.

(೧) ಮೃತನಿಗೆ ಇಬ್ಬರು ಸಂಬಂಧಿಕರಿದ್ದಾರೆ: ಅ) ಮಗನ ಮಗಳ ಮಗನ ಮಗ ಮತ್ತು (ಬ) ತಂಗಿಯ ಮಗಳ ಮಗ (ಅ) ವಾರಸದಾರನು (ಬ) ವಾರಸದಾರನಿಗಿಂತ ಒಂದು ತಲೆ ದೂರಿನವನಾದರೂ ಅವನಿಗೆ ವಂಶಾಗ್ರಕ್ರಮ ಶ್ರೇಣಿ ಗಳಿಲ್ಲ. ಕಾರಣ ಆತನಿಗೆ ಪ್ರಾಶಸ್ತ್ಯವಿದೆ.

(೨) ಮೃತನ ಇಬ್ಬರು ಸಂಬಂಧಿಕರೆಂದರೆ: (ಅ) ತಂಗಿಯ ಮಗಳ ಮಗಳು ಮತ್ತು ಬ) ಸೋದರ ಮಾವನ ಮಗನ ಮಗಳು. (ಅ) ವಾರಸದಾರಳು ವಂಶಾ ಗ್ರಕ್ರಮದಲ್ಲಿ ಒಂದು ಶ್ರೇಣಿಯನ್ನು ಪಡೆದಿದ್ದಾಳೆ; (ಬ) ವಾರಸದಾರನಿಗೆ ಇಂಥ ಎರಡು ಶೇಣಿಗಳಿವೆ. ಕಾರಣ ವಂಶಾಗ್ರಕ್ರಮದಲ್ಲಿ ಕಡಿಮೆ ಶ್ರೇಣಿಗಳುಳ್ಳ (ಅ) ವಾರಸದಾರಳಿಗೆ ಪ್ರಾಶಸ್ತ್ಯ ವಿದೆ

(೩) ಮೃತನ ನಂತರ ಇಬ್ಬರು ಸಂಬಧಿಕರು ಉಳಿದಿದ್ದಾರೆ: (ಅ) ತಾಯಿಯ

ತಂದೆಯ ತಾಯಿ ಮತ್ತು (ಬ) ತಂದೆಯ ಸೋದರತ್ತೆಯ ಮಗನ ಮಗ. ಇಬ್ಬರಿಗೂ ವಂಶಾಗ್ರ ಕ್ರಮದಲ್ಲಿ ಸಮನಾದ ಶ್ರೇಣಿಗಳಿವೆ. ಆದರೆ, (ಅ) ವಾರಸದಾರಳು ಯಾವುದೇ ವಂಶಾನುಕ್ರಮ ಶ್ರೇಣಿಯಲ್ಲಿ ಸಂಬಂಧಿಕಳಾಗಿಲ್ಲ; (ಬ) ವಾರಸದಾರನಾದರೆ ಇಂಥ ಮೂರು ಶ್ರೇಣಿಗಳನ್ನು ಪಡೆದಿದ್ದಾನೆ. ಕಾರಣ ನಿಯಮ (೨)ರಂತೆ (ಅ) ವಾರಸದಾರನಿಗೆ ಪ್ರಾಶಸ್ತ್ಯವುಂಟಾಗುತ್ತದೆ

೪ (ಅ) ತಾಯಿಯ ತಂದೆಯ ತಾಯಿ ಮತ್ತು (ಬ) ತಾಯಿಯ ತಂದೆಯ ತಂದೆ ಇವರು ಮೃತನ ಜೀವಂತ ಸಂಬಂಧಿಕರಾಗಿದ್ದಾರೆ. ಇಬ್ಬರೂ ಸಮನಾದ ವಂಶಾಗ್ರಕ್ರಮ ಶ್ರೇಣಿಗಳಿಂದ ಮೃತನ ವಾರಸದಾರರಾಗಿದ್ದಾರೆ. ಇಬ್ಬರಿಗೂ ವಂಶಾನುಕ್ರಮ ಶ್ರೇಣಿಗಳಿಲ್ಲ. ಕಾರಣ ಇಲ್ಲಿ ಯಾರಿಗೂ ಪ್ರಾಶಸ್ತ್ಯವುಂಟಾಗುವ ಪ್ರಶ್ನೆಯಿಲ್ಲ. ಇಬ್ಬರೂ ಏಕ ಕಾಲದಲ್ಲಿ ವಾರಸಾ ಪಡೆಯುತ್ತಾರೆ.

### ೭೭ ಕಲಮು ೮ ಕ್ಲಾಜ (ಕ)

ಇಬ್ಬರು ವಾರಸದಾರರಲ್ಲಿ ಒಬ್ಬನು ಗಂಡು ವಳಿಗನೂ, ಇನ್ನೊಬ್ಬನು ಹೆಣ್ಣು ವಳಿಗನೂ ಆಗಿದ್ದರೆ, ಈ ಕಲಮಿನ ಪ್ರಾಶಸ್ತ್ಯ ಕ್ರಮ ನಿಯಮಗಳು ಅನ್ವಯಿಸುವದಿಲ್ಲ. ಕಲಮು ೮ ರ ಕ್ಲಾಜ (ಕ) ದನ್ವಯ ಗಂಡುವಳಿಗನಿಗೆ ಪ್ರಾಶಸ್ತ್ಯವಿದೆ.

## ಕ. ೧೩

ಶ್ರೇಣಿಗಳ ಎಣಿಕ

(೧) ಗಂಡುವಳಿಗರ ಅಥವಾ ಹೆಣ್ಣುವಳಿಗರ ವಾರಸಾ ಪ್ರಾಪ್ತಿ ಕ್ರಮವನ್ನು ನಿರ್ಧರಿಸುವುದಕ್ಕೋಸ್ಕರ, ಅಮೃತ್ಯುಲೇಖೀಯನಿಂದ ವಾರಸದಾರನವರೆಗಿನ ಸಂಬಂಧವನ್ನು, ಸಂದರ್ಭಾನುಸಾರವಾಗಿ, ವಂಶಾಗ್ರಕ್ರಮ ಶ್ರೇಣಿಗಳಲ್ಲಾಗಲಿ, ಅಥವಾ ವಂಶಾನುಕ್ರಮ ಶ್ರೇಣಿಗಳಲ್ಲಾಗಲಿ, ಇಲ್ಲವೆ ಎರಡೂಕ್ರಮಗಳ ಶ್ರೇಣಿಗಳಲ್ಲಾಗಲಿ ಎಣಿಕೆ ಮಾಡತಕ್ಕದ್ದು.

(೨) ವಂಶಾಗ್ರಕ್ರಮ ಇಲ್ಲವೆ ವಂಶಾನುಕ್ರಮ ಶ್ರೇಣಿಗಳನ್ನು ಅಮೃತ್ಯುಲೇಖೀಯ ಸಹಿತವಾಗಿ ಎಣಿಕೆಮಾಡತಕ್ಕದ್ದು.

(೩) ಅಗ್ರಕ್ರಮದ (Ascending) ಇಲ್ಲವೆ ಅನುಕ್ರಮದ (Des

oendnig) ಪ್ರತಿಯೊಂದು ತಲೆಮಾರು ಒಂದು ಶ್ರೇಣಿಯೆನಿ ಸುತ ದೆ.

## ಟೀಕೆ

### ೨೮ ಉಪಕಲಮು (೩)

ಈ ಉಪ ಕಲಮಿನನ್ವಯ ವಂಶಾಗ್ರಕ್ರಮದ ಅಥವಾ ವಂಶಾನುಕ್ರಮದ ಪ್ರತಿಯೊಂದು ತಲೆಮಾರನ್ನು ಒಂದು ಶ್ರೇಣಿಯೆಂದು ಪರಿಗಣಿಸ ಬೇಕಾಗುತ್ತದೆ. ಅಮೃತ್ಯು ಲೇಖೀಯನು ಪ್ರಥಮ ಶ್ರೇಣಿಯೆಂದು ಎಣಿಕೆಯಾಗುತ್ತಾನೆ. ಅವನ ತಂದೆಯ ತಲೆಮಾರು ವಂಶಾಗ್ರಕ್ರಮದಲ್ಲಿ ಎರಡನೆಯ ಶ್ರೇಣಿಯಾಗುತ್ತದೆ. ಹಾಗೆಯೆ ಅಮೃತ್ಯು ಲೇಖೀಯನ ಮಗನ ತಲೆಮಾರು ವಂಶಾನುಕ್ರಮದಲ್ಲಿ ಎರಡನೆಯ ಶ್ರೇಣಿಯೆನಿಸುತ್ತದೆ

ಕೆಳಗಿನ ದೃಷ್ಟಾಂತಗಳಿಂದ ಶ್ರೇಣಿಗಳ ಎಣಿಕೆಯ ವಿಧಾನ ವಿಶದವಾಗುತ್ತದೆ:

(೧. ಸಂಬಂಧಿಸಿದ ವಾರಸದಾರನು ಅಮೃತ್ಯು ಲೇಖೀಯನ ತಂದೆಯ ತಾಯಿಯ ತಂದೆಯೆಂದು ತಿಳಿಯೋಣ. ಆತನಿಗೆ ವಂಶಾನುಕ್ರಮ ಶ್ರೇಣಿಗಳಿಲ್ಲ. ಆದರೆ, ನಾಲ್ಕು ವಂಶಾಗ್ರಕ್ರಮ ಶ್ರೇಣಿಗಳಿದ್ದು ಅವು ಹೀಗಿವೆ: (೧) ಅಮೃತ್ಯು ಲೇಖೀಯ (೨) ಆತನ ತಂದೆ (೩ ಆ ತಂದೆಯ ತಾಯಿ ಮತ್ತು (೪) ಅವಳ ತಂದೆ (ವಾರಸದಾರ).

(೨) ಸಂಬಂಧಿಸಿದ ವಾರಸದಾರಳು ಮಗನ ಮಗಳ ಮಗನ ಮಗಳಾಗಿದ್ದಾಳೆ. ಇವಳಿಗೆ ವಂಶಾಗ್ರ ಕ್ರಮದಲ್ಲಿ ಶ್ರೇಣಿಗಳೇಇಲ್ಲ. ಆದರೆ, ವಂಶಾನುಕ್ರಮ ದಲ್ಲಿ ಐದು ಶ್ರೇಣಿಗಳಿದ್ದು ಅವು ಹೀಗಿವೆ: ೧) ಅಮೃತ್ಯು ಲೇಖೀಯ (೨) ಆತನ ಮಗ (೩) ಆ ಮಗನ ಮಗಳು (೪) ಅವಳ ಮಗ ಮತ್ತು (೫) ಅವನ ಮಗಳು [ವಾರಸದಾರಳು]

(೩) ಸಂಬಂಧಿಸಿದ ವಾರಸದಾರನು ಅಮೃತ್ಯು ಲೇಖೀಯನ ತಾಯಿಯ ತಂದೆಯ ತಂದೆಯ ಮಗಳ ಮಗನಾಗಿದ್ದಾನೆ. ಈತನಿಗೆ ವಂಶಾಗ್ರ ಕ್ರಮದಲ್ಲಿ ನಾಲ್ಕು ಶ್ರೇಣಿಗಳಿವೆ: (೧) ಅಮೃತ್ಯು ಲೇಖೀಯ (೨ ಆತನ ತಾಯಿ (೩) ಅವಳ ತಂದೆ ಮತ್ತು (೪) ಆ ತಂದೆಯ ತಂದೆ. ವಂಶಾನು ಕ್ರಮದಲ್ಲಿ ಎರಡು ಶ್ರೇಣಿಗಳಿವೆ: (೧) ತಾಯಿಯ ತಂದೆಯ ತಂದೆ (ಸಾಮಾನ್ಯ ಪೂರ್ವಜ)ಯ ಮಗಳು ಮತ್ತು (೨) ಅವಳ ಮಗ ವಾರಸದಾರ).

## ಕ. ೧೪

ಹಿಂದೂ ಸ್ತ್ರೀಯ ಆಸ್ತಿ ಸ್ವತಂತ್ರ ಆಸ್ತಿಯಾಗಿರತಕ್ಕದ್ದು.

[೧] ಈ ಕಾಯ್ದೆಯು ಜಾರಿಗೆ ಬರುವ ಮೊದಲು ಅಥವಾ ಅನಂತರ ಅವಳಿಗೆ ಪ್ರಾಪ್ತವಾಗಿದ್ದು, ಹಿಂದೂ ಸ್ತ್ರೀಯೊಬ್ಬಳ ಕಬ್ಜೆಯಲ್ಲಿರುವ ಆಸ್ತಿಯನ್ನು ಆಕೆಯು ಸ್ವತಂತ್ರ ಮಾಲಕಳೆಂದು ಧಾರಣಮಾಡಬೇಕಲ್ಲದೆ ಸೀಮಿತ ಮಾಲಕಳೆಂದಲ್ಲ.

**ವಿವರಣೆ—** ಈ ಉಪಕಲಮಿನಲ್ಲಿಯ "ಆಸ್ತಿ"ಶಬ್ದದ ಅರ್ಥದಲ್ಲಿ–ವಾರಸಾ ಇಲ್ಲವೆ ಮೃತ್ಯುಲೇಖ ಮುಖಾಂತರವಾಗಲಿ, ವಾಟಣಿಯಲ್ಲಾಗಲಿ, ಪೋಟಗಿ ಅಥವಾ ಪೋಟಗಿ ಬಾಕಿಯಬದಲು ಎಂದಾಗಲಿ, ಸಂಬಂಧಿಕರಿಂದ ಅಥವಾ ಇತರರಿಂದ ವಿವಾಹಸಮಯದಲ್ಲಿ, ವಿವಾಹದ ನಂತರ ಅಥವಾ ವಿವಾಹಪೂರ್ವದಲ್ಲಿ ಬಕ್ಷೀಸ್, ಎಂದಾಗಲಿ, ಸ್ವಕೀಯ ಚಾತುರ್ಯ ಇಲ್ಲವೆ ಶ್ರಮದಿಂದಾಗಲಿ, ಖರೀದಿ ಅಥವಾ ವಿರೋಧಕಬ್ಜೆಯಿಂದಾಗಲಿ, ಇಲ್ಲವೆ ಇನ್ನಾವುದೇ ಬೇರೆ ವಿಧಾನದಿಂದಾಗಲಿ,–ಹಿಂದೂಸ್ತ್ರೀಯಳಿಗೆ ಪ್ರಾಪ್ತವಾದ ಸ್ಥಾವರ ಮತ್ತು ಜಂಗಮ ಆಸ್ತಿಯಲ್ಲದೆ, ಈ ಕಾಯ್ದೆ ಜಾರಿಗೆ ಬರುವ ಪೂರ್ವದಲ್ಲಿ ಅವಳು ಸ್ತ್ರೀಧನ ಸ್ವರೂಪದಲ್ಲಿ ಧಾರಣ ಮಾಡುತ್ತಿದ್ದ ಇಂಥ ಯಾವತ್ತೂ ಆಸ್ತಿಯೂ ಸಮಾವಿಷ್ಟವಾಗುತ್ತದೆ.

[೨] ಬಕ್ಷೀಸ್,ಮೃತ್ಯುಪತ್ರ ಅಥವಾ ಇತರ ದಸ್ತಾವೇಜಿನಿಂದಾಗಲಿ, ದಿವಾಣಿ ಕೋರ್ಟಿನ ಡಿಕ್ರಿ ಅಥವಾ ಹುಕುಮಿನಿಂದಾಗಲಿ,ಇಲ್ಲವೆ ಅವಾರ್ಡಿನಿಂದಾಗಲಿ–ಆಸ್ತಿ ಪ್ರಾಪ್ತಿಯಾಗಿದ್ದು; ಆ ಬಕ್ಷೀಸ್,ಮೃತ್ಯುಪತ್ರ, ಇತರ ದಸ್ತಾವೇಜು, ಡಿಕ್ರಿ, ಹುಕುಮ ಅಥವಾ ಅವಾರ್ಡಿನ ಶರ್ತುಗಳು ಪ್ರಾಪ್ತ

ಆಸ್ತಿಯಲ್ಲಿ ಸೀಮಿತ ಮಾಲಿಕಿ(Limited estate) ಯನ್ನು ವಿಧಿಸುತ್ತಿದ್ದರೆ,—ಅಂಥ ಆಸ್ತಿಗೆ ೧ನೆಯ ಉಪಕಲಮಿನಲ್ಲಿಹಕ ವಾದುದಾವುದೂ ಅನ್ವಯಿಸತಕ್ಕದ್ದಲ್ಲ.

### ಟೀಕೆ

### ವ್ಯಾಪ್ತಿ ಹಾಗೂ ಉದ್ದೇಶ

ಈ ಕಾಯ್ದೆ ಜಾರಿಗೆ ಬರುವ ಪೂರ್ವದಲ್ಲಿ ಹಿಂದೂ ಸ್ತ್ರೀಯು ಮಾಲಕಿಯದಲ್ಲಿ ರುವ ಆಸ್ತಿ ಬಹುತರ ಎರಡು ಪ್ರಕಾರವಾಗಿರುತ್ತಿತ್ತು: (೧) ಹಿಂದೂ ಸ್ತ್ರೀ ಸ್ವಾಮಿತ್ವ ಅಥವಾ (೨) ಸ್ತ್ರೀಧನ. ಸ್ತ್ರೀಧನದ ಸ್ತ್ರೀ ಸ್ವಾಮಿತ್ವ ಬಹುತರ ಅಸೀಮಿತವಾಗಿದ್ದು, ಅದು ಅವಳ ವಾರಸದಾರರಿಗೆ ದಾಯವಾಗಿ ಸಲ್ಲುತ್ತಿತ್ತು. ಹಿಂದೂ ಸ್ತ್ರೀಸ್ವಾಮಿತ್ವ ಅಥವಾ ಲಿಮಿಟೆಡ್ ಇಸ್ಟೇಟ ಆಸ್ತಿಗೆ ಹಿಂದೂಸ್ತ್ರೀಯು ಬಹುಮಟ್ಟಿಗೆ ಒಡೆಯಳೇ ಆಗಿದ್ದರೂ, ಅದನ್ನು ವಿಲೇವಾರಿ ಮಾಡುವಲ್ಲಿ ಅವಳಮೇಲೆ ಕೆಲವು ನಿರ್ಭಂಧಗಳಿರುತ್ತಿದ್ದವು; ಅಲ್ಲದೆ ಅವಳ ಮರಣಾನಂತರ ಆ ಆಸ್ತಿ ಆಕೆಯ ಸ್ವಂತ ವಾರಸದಾರರಿಗೆ ದಾಯವೆಂದು ಸಲ್ಲದೆ, ಕೊನೆಯ ಸ್ವತಂತ್ರ ಮಾಲಕನ ವಾರಸದಾರರಿಗೆ ಪುನಃಪ್ರಾಪ್ತವಾಗುತ್ತಿತ್ತು. ಈ ಕಲಮಿನಿಂದಾಗಿ ಸ್ತ್ರೀ ಹಿಂದುವಿನ ಕಬ್ಜೆಯಲ್ಲಿರುವ ಆಸ್ತಿಯು ಅವಳ ಸ್ವತಂತ್ರ (Absolute) ಸ್ವಾಮಿತ್ವದ ಆಸ್ತಿಯೆನಿಸುತ್ತದೆ. ಅರ್ಥಾತ್, ಪುರುಷ ಆಸ್ತಿಧಾರಕನೊಬ್ಬನ ಹಾಗೆಯೇ ಹಿಂದೂ ಸ್ತ್ರೀಯಾದರೂ ಇನ್ನುಮುಂದೆ ತನ್ನ ವಶಕ್ಕಿರುವ ಸ್ವಸ್ವಾಮಿತ್ವದ ಆಸ್ತಿಯನ್ನು ಮನಸ್ಸಿಗೆ ಬಂದ ರೀತಿಯಲ್ಲಿ ವ್ಯವಸ್ಥೆ ಮಾಡಬಲ್ಲವಳಾಗಿದ್ದಾಳೆ. ಕಾರಣ ಇನ್ನು ಮೇಲೆ, ಹಿಂದೂಸ್ತ್ರೀಗೆ ಸ್ತ್ರೀಧನವೆಂದೋ, ಇತರ ವಿಧವಾಗಿಯೋ ಪ್ರಾಪ್ತವಾದ, ಅಥವಾ ಪ್ರಾಪ್ತವಾಗುವ ಯಾವತ್ತೂ ಆಸ್ತಿಯು, ಉಪಕಲಮು [೨] ರಲ್ಲಿ ನಿರ್ದಿಷ್ಟವಾದ ವಿನಾಯತಿಗಳನ್ನು ಹೊರತುಪಡಿಸಿ, ಆಕೆಯ ಅನಿರ್ಬಂಧ ಸ್ವಾಮಿತ್ವದ ಆಸ್ತಿಯೆನಿಸುತ್ತವೆ. ಉಪಕಲಮು [೨]ರಲ್ಲಿಯ ವಿನಾಯತಿಗಳು ಸಮಾನ ಸನ್ನಿವೇಶಗಳಲ್ಲಿ ಪುರುಷರಿಗೂ ಅನ್ವಯಿಸಬಹುದಾದ್ದರಿಂದ, ಅವುಗಳಿಂದ ಸ್ತ್ರೀಯರ ಹಕ್ಕುಗಳಿಗೆ ಮಾತ್ರವೇ ವ್ಯತ್ಯಯ ಬರುವದೆಂದು ಹೇಳಲುಬಾರದು.

### ೮೦ 'ಆಸ್ತಿ' ಪದದ ವಿವರಣೆ

ಈ ಕಲಮಿನ 'ಆಸ್ತಿ' ಶಬ್ದವನ್ನು ಹಿಂದೂ ಸ್ತ್ರೀಯೊಬ್ಬಳು ಸಂಪಾದಿಸಬಹುದಾದ ಬಹುತರ ಎಲ್ಲಪ್ರಕಾರದ ಆಸ್ತಿಗಳನ್ನೂ ಒಳಗೊಳ್ಳುವಂತೆ ವ್ಯಾಖ್ಯಾಯಿಸಲಾಗಿದೆ. ಅಲ್ಲದೆ, ಅದರಲ್ಲಿ ಹಿಂದೂ ಸ್ತ್ರೀಯಳು ಈ ಕಾಯ್ದೆ ಜಾರಿಗೆ ಬರುವ ಪೂರ್ವದಲ್ಲಿ ಸ್ತ್ರೀಧನವೆಂದು ಪಡೆದ ಆಸ್ತಿಯನ್ನೂ ಸಮಾವೇಶಗೊಳಿಸಲಾಗಿದೆ.

ಆಸ್ತಿ ಸಂಪಾದನೆಯ ವಿವಿಧ ಮೂಲಗಳನ್ನು ನಿರ್ದಿಷ್ಟ ಗೊಳಿಸುವದರಿಂದ ಯಾವುದೇ ವಿಶಿಷ್ಟ ಪ್ರಕಾರದ ಆಸ್ತಿಗೆ ಈ ಕಲಮು ಅನ್ವಯಿಸುವದೋ ಇಲ್ಲವೋ ಎಂಬ ಬಗ್ಗೆ ಸಂದೇಹ ಉಳಿಯುವದಿಲ್ಲ. 'ಇನ್ನಾವುದೇ ಇತರ ವಿಧಾನಗಳಿಂದ' ಎಂಬ ಶಬ್ದಪ್ರಯೋಗದಿಂದ ಈ ಕಲಮಿನಲ್ಲಿ ನಿರ್ದಿಷ್ಟ ಗೊಳಿಸದ ಮಿಕ್ಕ ಮೂಲಗಳಿಂದ ಪ್ರಾಪ್ತವಾದ ಆಸ್ತಿಯೂ ಕಲಮಿನ ಅವಕಾಶದಲ್ಲಿ ಬರುವಂತೆ ಮಾಡಲಾಗಿದೆ. ವೇಶ್ಯೆಯೊಬ್ಬಳು ವೇಶ್ಯಾವೃತ್ತಿಯಿಂದ ಸಂಪಾದಿಸಿದ ಆಸ್ತಿ ಅಥವಾ ಹಿಂದೂ ಸ್ತ್ರೀಯೊಬ್ಬಳು ಅಪಸಾತಿನಲ್ಲಿ ಪಡೆದ ಆಸ್ತಿ, ಇಂಥ ಪ್ರಕಾರಗಳಿಗೆ ಉದಾಹರಣೆಗಳಾಗಿವೆ.

## ೮೧ ಮೊದಲು ಹಿಂದೂ ಸ್ತ್ರೀಯರ ಆಸ್ತಿ ಸ್ವಾಮಿತ್ವ

ಹಿಂದೂ ಕಾನೂನಿನ ಕೆಳಗೆ ಸಾಮಾನ್ಯವಾಗಿ ಸ್ತ್ರೀಯರು ಪಡೆಯುವ ಆಸ್ತಿ ಸೀಮಿತ ಸ್ವಾಮಿತ್ವದ ಆಸ್ತಿಯೇ ಆಗಿರುತ್ತಿತ್ತು. ಮುಂಬಯಿಯಲ್ಲಿ ಮಾತ್ರ ಗೋತ್ರಜ ಸಪಿಂಡರಾದ ಸ್ತ್ರೀವಾರಸದಾರರಿಗೆ ವಾರಸಾ ರೀತ್ಯಾ ಸಲ್ಲುವ ಆಸ್ತಿ ಸ್ವತಂತ್ರ ಆಸ್ತಿಯಾಗಿ ಸಲ್ಲುತ್ತಿತ್ತು, [ ಕೇಸರ ಬಾಯಿ ವಿ ಹಂಸರಾಜ 30 Bom 431 ]. ಹಾಗೆಯೇ ಸ್ತ್ರೀ ಯೊಬ್ಬಳಿಂದ ವಾರಸಾರಿತ್ಯಾ ಪಡೆದ ಆಸ್ತಿಯೂ, ಸ್ತ್ರೀಧನ ಆಸ್ತಿಯಾಗಿಸಲ್ಲುತ್ತಿತ್ತು. ಸ್ತ್ರೀಧನದಲ್ಲೂ ಸೌದಾಯಕ ವಲ್ಲದ ಸ್ತ್ರೀಧನದ ವಿಲೇವಾರಿಯಲ್ಲಿ ಅವಳು ತನ್ನ ಗಂಡನ ನಿಯಂತ್ರಣಕ್ಕೊಳಪಟ್ಟದ್ದಳು, [ ಗಜಾನನ ಯಶವಂತ ವಿ. ಪಾಂಡುರಂಗ 52 Bom L R 238 ]. ಪ್ರಸ್ತುತ ಕಲಮು ಸ್ತ್ರೀ ಹಿಂದುವಿಗೆ ಪ್ರಾಪ್ತವಾದ ಇಲ್ಲವೆ ಪ್ರಾಪ್ತವಾಗುವ ಬಹುತರ ಯಾವತ್ತೂ ಆಸ್ತಿಯನ್ನು ಸರ್ವಸಾಮಾನ್ಯವಾಗಿ ಸ್ವತಂತ್ರ ಆಸ್ತಿಯಾಗಿ ಪರಿಗಣಿಸುತ್ತದೆ.

ಭಾರತದ ಮುಸಲ್ಮಾನ, ಕ್ರೈಸ್ತ, ಹಾಗೂ ಪಾರಸಿ ಸ್ತ್ರೀಯರು ತಮಗೆ ಪ್ರಾಪ್ತವಾದ ಆಸ್ತಿಯನ್ನು ಸ್ವತಂತ್ರ ಆಸ್ತಿಯೆಂದೇ ಧಾರಣ ಮಾಡುತ್ತಾರೆ. ಹೀಗಿರುವಾಗ ಹಿಂದೂ ಸ್ತ್ರೀಯರು ಮಾತ್ರ ಆಸ್ತಿಯ ಪೂರ್ಣ ಸ್ವಾಮಿತ್ವ ಪಡೆದಿರಲು ಅನರ್ಹರೆಂದು ಸಾಧಿಸುವದು ಕಷ್ಟ. ಹಿಂದಿನ ಕಾಲದ ಪರಿಸ್ಥಿತಿ ಯೇನಿದ್ದರೂ, ಇಂದು ಹಿಂದೂ ಸ್ತ್ರೀಯರು ನ್ಯಾಯ ಮೂರ್ತಿಗಳು, ಶಾಸಕರು, ಮಂತ್ರಿಗಳು, ಹಾಗೂ ರಾಯಭಾರಿ ಗಳಾಗಲು ಅರ್ಹರೆನ್ನುವಾಗ ಸ್ವತಂತ್ರ ಆಸ್ತಿ ಸ್ವಾಮಿತ್ವವನ್ನು ಪಡೆಯಲು ಅನರ್ಹರೆನ್ನಲು ಬರುವ ಹಾಗಿಲ್ಲ.

## ೮೨ ಸ್ತ್ರೀಧನ ಆಸ್ತಿ

ಸ್ತ್ರೀ ಧನವು ಸಾಮಾನ್ಯವಾಗಿ ಸ್ತ್ರೀಪ್ರಾಪ್ತ ಆಸ್ತಿಯೆಂದು ತೋರುತ್ತಿದ್ದರೂ ಹಿಂದೂ ಕಾನೂನಿನ ವಿವಿಧ ಸಂಪ್ರದಾಯ ಗಳಲ್ಲಿ ಆ ಶಬ್ದಕ್ಕೆ ವೈಶಿಷ್ಟ್ಯಪೂರ್ಣ

ವಾದ ಅರ್ಥಗಳಿವೆ. ಇಲ್ಲಿಯ ವರೆಗಿನ ನ್ಯಾಯನಿರ್ಣಯಗಳನ್ನು ಗಮನಿಸಿ ಯಾವ ಯಾವ ಆಸ್ತಿ ಸ್ತ್ರೀಧನ ಆಸ್ತಿಯೆನಿಸುವದೆಂಬುವನ್ನು ಕೆಳಗಿನಂತೆ ಸಂಕ್ಷೇಪಿಸಲಬಹುದು:

(೧) ಸಂಬಂಧಿಕರು ಅಥವಾ ಇತರರಿಂದ ಬಕ್ಷೀಷ್, ಇನಾಮು, ಅಥವಾ ಮೃತ್ಯುಲೇಖ ಪ್ರಾಪ್ತಿಯಾಗಿ ಹಿಂದೂ ಸ್ತ್ರೀಗೆ ದೊರೆತ ಆಸ್ತಿಯಾಗಿದ್ದು ಅದನ್ನು ಸ್ವತಂತ್ರವಾಗಿ ವ್ಯವಸ್ಥಾಪನೆ ಮಾಡುವ ಅಧಿಕಾರ ಅವಳಿಗಿದ್ದರೆ, ಅಂಥ ಆಸ್ತಿ, ( ನಾಂಬಶಿವ ವಿ. ವೆಂಕಟೇಶ್ವರ 31 Mad 179).

(೨) ಪೋಟಗಿಯೆಂದು ಅಥವಾ ಪೋಟಗಿ ಬದಲಾಗಿ ಕೊಟ್ಟ ಆಸ್ತಿ, [ ಜನಾರ್ಧನ ವಿ. ಸೋನುಬಾಯಿ A I R 1942 Nag 30 ].

(೩ ವಿವಾಹಿತಳಾಗಿರುವಾಗ [2 C W N 161 162] ಅಥವಾ ವಿಧವೆ ಯಾದಾಗ ]32 All 189 ] ವಿರೋಧ ಆಬ್ಜೆಯಿಂದ ಪಡೆದ ಆಸ್ತಿ,[ 13 IC 644 ].

(೪) ಕೌಮಾರ್ಯ ಅಥವಾ ವೈಧವ್ಯ ಕಾಲದಲ್ಲಿ ಯಂತ್ರಕಲೆ ಅಥವಾ ಇತರ ವಿಧದ ಪರಿಶ್ರಮದಿಂದ ಸಂಪಾದಿಸಿದ ಆಸ್ತಿ,[ 21 Mad 100 ].

(೫) ಸ್ತ್ರೀಧನದ ನೆರವಿನಿಂದ ಖರೀದಿ ಮಾಡಿದ ಆಸ್ತಿ, [31 Mad 321].

(೬) ಎರಡನೆಯ. ಹೆಂಡತಿಯನ್ನಾಗಲು ಮೊದಲನೆಯ ಹೆಂಡತಿಯನ್ನು ಸಂತುಷ್ಟಗೊಳಿಸಲು ಕೊಟ್ಟ ಆಸ್ತಿ.

(೭) ಲಗ್ನದ ನಂತರದ ಅಥವಾ ಅನ್ವಾಧೇಯಕ ಕಾಣಿಕೆಗಳು, [3 Bom L.R. 201].

(೮) ಅಧ್ಯಗ್ನಿ ಕಾಣಿಕೆಗಳು.

(೯) ಅಧ್ಯಾವಾಹನಿಕ [ ಮೆರವಣಿಗೆಯ ಕಾಲದ ] ಕಾಣಿಕೆಗಳು.

(೧೦) ಶುಲ್ಕ ಅಥವಾ ತೆರವಿನ ರೂಪದಿಂದ ಪಡೆದ ಧನ

[೧೧] ಪಾದವಂದನಿಕ ಕಾಣಿಕೆಗಳು.

[೧೨] ವ್ಯವಹಾರಮಯೂಖದನ್ವಯ ಮುಂಬಯಿನಗರ ಹಾಗೂ ಗುಜ

ರಾಥಗಳಲ್ಲಿ ಗೋತ್ರಜ ಸಪಿಂಡರಾದ ಸ್ತ್ರೀ ವಾರಸದಾರರು ವಾರಸಾನಾತೆಯಿಂದ ಪಡೆದ ಆಸ್ತಿ, [ಗುಳ್ಳಪ್ಪ ವಿ. ತಾಯವ್ವ 31 Bom 453].

[೧೩] ಇತರ ಕ ಯ ಸ್ತ್ರೀಯರು ಸ್ತ್ರೀಧನ ಆಸ್ತಿಯಿಂದ ಪಡೆದ ಆದಾಯ ಹಾಗೂ ಅದರಿಂದಾದ ಉಳಿತಾಯ, [ಆಯಣ್ಣಾ ವಿ. ವೆಂಕಯ್ಯಾ 25 Mad 3೨1]

### ೮೪ ಈ ಕಾಯ್ದೆಯ ಪರಿಣಾಮ

ಹಿಂದೂ ಕಾನೂನಿನಲ್ಲಿ ಪ್ರಾಪ್ತಿ ಮೂಲಕ್ಕನುಸಾರವಾಗಿ ವಿವಿಧಪ್ರಕಾರದ ಸ್ತ್ರೀಧನ ಆಸ್ತಿಗಳಿದ್ದು, ಅವುಗಳ ಅನುಪ್ರಾಪ್ತಿಕ್ರಮವೂ ಕಾನೂನಿನ ವಿವಿಧ ಸಂಪ್ರದಾಯಗಳಿಗನುಸಾರ ಭಿನ್ನವಾಗಿರುತ್ತಿತ್ತು. ಈ ಕಲಮಿನ 'ಆಸ್ತಿ' ಶಬ್ದದ ವಿವರಣೆಯಲ್ಲಿ ಈ ಕಾಯ್ದೆ ಜಾರಿಗೆ ಬರುವ ಪೂರ್ವದಲ್ಲಿ ಹಿಂದೂ ಸ್ತ್ರೀಯು ಸ್ತ್ರೀಧನವೆಂದು ಧಾರಣ ಮಾಡಿದ ಆಸ್ತಿಯೂ ಸಮಾವೇಶವಾಗುತ್ತದೆ ಈ ಏರ್ಪಾಡಿನಿಂದ ಸ್ತ್ರೀಧನದ ವಿವಿಧ ಪ್ರಕಾರಗಳೂ, ವಿವಿಧ ಅನುಪ್ರಾಪ್ತಿ ಕ್ರಮಗಳೂ ರದ್ದಾಗುತ್ತವೆ. 'ಸ್ತ್ರೀಧನ' ವನ್ನೊಳಗೊಂಡು ಎಲ್ಲ ಹಿಂದೂ ಸ್ತ್ರೀಪ್ರಾಪ್ತ ಆಸ್ತಿಯೂ, ೧೫ ನೇ ಕಲಮು ವಿಧಿಸಿದ ನಿಯಮುಗಳಿಗನುಸಾರ ಅನುಪ್ರಾಪ್ತವಾಗುತ್ತದೆ. ಈ ಕಾಯ್ದೆಯ ೧೪ ನೆಯ ಮತ್ತು ೧೫ ನೆಯ ಕಲಮುಗಳು ಹಿಂದೂ ಕಾನೂನಿನ ಸಂಕೀರ್ಣತಮವಾದ ಭಾಗವೊಂದನ್ನು ಸರಳತಮ ಗೊಳಿಸುತ್ತವೆ.

## ಕ. ೧೫

**ಸ್ತ್ರೀಯರ ವಾರಸಾ ಕ್ರಮವನ್ನು ಕುರಿತು ಸಾಮಾನ್ಯ ನಿಯಮುಗಳು**

[೧] ಅನ್ಮೃತ್ಯುಲೇಖೀಯಳಾಗಿ ಮೃತಳಾದ ಹಿಂದೂಸ್ತ್ರೀಯ ಆಸ್ತಿಯು, ಕಲಮು [೧೬] ರಲ್ಲಿ ವಿಧಿಸಲಾದ ನಿಯಮುಗಳನ್ವಯ, ಕೆಳಗಿನ ಕ್ರಮದಲ್ಲಿ ಅನುಪ್ರಾಪ್ತವಾಗತಕ್ಕದ್ದು:

ಮೊದಲನೆಯದಾಗಿ ಪುತ್ರರು ಹಾಗೂ ಪುತ್ರಿಯರಿಗೆ [ಪೂರ್ವ ಮೃತ ಪುತ್ರ ಹಾಗೂ ಪುತ್ರಿಯರ ಮಕ್ಕಳನ್ನೊಳಗೊಂಡು], ಮತ್ತು ಪತಿಗೆ;

**ಬ** ಎರಡನೆಯದಾಗಿ, ಪತಿಯ ವಾರಸದಾರರಿಗೆ;

**ಕ** ಮೂರನೆಯದಾಗಿ, ತಾಯಿಗೆ ಮತ್ತು ತಂದೆಗೆ;

ಡ ನ್ಯಾಕನೆಯದಾಗಿ, ತಂದೆಯ ವಾರಸದಾರರಿಗೆ;

ಇ ಕೊನೆಯದಾಗಿ, ತಾಯಿಯ ವಾರಸದಾರರಿಗೆ.

[೨] ಉಪಕಲಮು [೧] ರಲ್ಲೇನೆ ಅಡಕವಾಗಿದ್ದರೂ—

ಅ ಹಿಂದೂಸ್ತ್ರೀಯು ತನ್ನ ತಂದೆ ಅಥವಾ ತಾಯಿಯಿಂದ ದಾಯವಾಗಿ ಪಡೆದ ಆಸ್ತಿಯು,ಮೃತನ ಪುತ್ರ ಅಥವಾ ಪುತ್ರಿ [ಪೂರ್ವಮೃತ ಪುತ್ರ ಅಥವಾ ಪುತ್ರಿಯರನ್ನೊಳಗೊಂಡು] ಯರು ಇಲ್ಲದಿದ್ದ ಪಕ್ಷದಲ್ಲಿ, ಉಪಕಲಮು [೧] ರಲ್ಲಿ ನಿರ್ದಿಷ್ಟರಾದ ಇತರ ವಾರಸಸದಾರರಿಗಾಗಲಿ,ಅಲ್ಲಿ ವಿಧಿಸಲಾದ ಕ್ರಮದಲ್ಲಾಗಲಿ,ಅನುಪ್ರಾಪ್ತವಾಗದೆ. ತಂದೆಯ ವಾರಸದಾರರಿಗೆ ಅನುಪ್ರಾಪ್ತವಾಗತಕ್ಕದ್ದು; ಮತ್ತು

ಬ ಹಿಂದೂ ಸ್ತ್ರೀಯು ತನ್ನ ಗಂಡ ಅಥವಾ ಗಂಡನ ತಂದೆಯಿಂದ ದಾಯವಾಗಿ ಪಡೆದ ಆಸ್ತಿಯು, ಮೃತಳ ಪುತ್ರ ಅಥ ವಾಪುತ್ರಿ [ಪೂರ್ವಮೃತ ಪುತ್ರ ಅಥವಾ ಪುತ್ರಿಯ ಮಕ್ಕಳನ್ನೊಳಗೊಂಡು] ಯರು ಇಲ್ಲದಿದ್ದ ಪಕ್ಷವಲ್ಲಿ, ಉಪಕಲಮು [೧] ರಲ್ಲಿ ನಿರ್ದಿಷ್ಟರಾದ ಇತರ ವಾರಸದಾರರಿಗಾಗಲಿ, ಅಥವಾ ಅಲ್ಲಿ ವಿಧಿಸಿದ ಕ್ರಮದಲ್ಲಾಗಲಿ, ಅನುಪ್ರಾಪ್ತವಾಗದೆ, ಗಂಡನ ವಾರಸದಾರರಿಗೆ ಅನುಪ್ರಾಪ್ತವಾಗತಕ್ಕದು.

## ಟೀಕೆ

### ೮೫ ವ್ಯಾಪ್ತಿ ಹಾಗೂ ಉದ್ದೇಶ

ಈ ಕಲಮಿನಲ್ಲಿ ಹಿಂದೂ ಸ್ತ್ರೀಯು ಅಮೃತ್ಯುಲೇಖೀಯಳಾಗಿ ಮೃತಳಾದರೆ, ಅವಳ ಆಸ್ತಿ ಯಾರು ಯಾರಿಗೆ, ಯಾವ ಕ್ರಮದಲ್ಲಿ ಅನುಪ್ರಾಪ್ತವಾಗತಕ್ಕದ್ದೆಂಬ ಬಗ್ಗೆ. ಸಾಮಾನ್ಯ ನಿಯಮಗಳನ್ನು ವಿಧಿಸಲಾಗಿದೆ. ಅನುಪ್ರಾಪ್ತಿಕ್ರಮವು ೧೬ನೆಯ ಕಲಮಿನಲ್ಲಿ ನಿರ್ದಿಷ್ಟವಾಗಿದೆಯೆಂದು ಹೇಳಲಾಗಿದೆ. ಈ ಏರ್ಪಾಡುಗಳು, ಈ ಮೊದಲು ಮರುಮಕ್ಕತ್ತಯಂ ಇಲ್ಲವೆ ಅಳಿಯಸಂತಾನ ಕಾನೂನಿಗಂಕಿತರಾಗಿದ್ದ ಸ್ತ್ರೀಯರನ್ನು ವ್ಯಾವರ್ತಿಸಿ, ಉಳಿದೆಲ್ಲ ಹಿಂದೂ ಸ್ತ್ರೀಯರಿಗೂ ಅನ್ವಯಿಸುತ್ತವೆ.

ಈ ಮೊದಲಿನ ಹಿಂದೂ ಕಾನೂನಿನಲ್ಲಿ ಸ್ತ್ರೀಧನ ಆಸ್ತಿಗೆ ವಾರಸಾಕ್ರಮವು ಸ್ತ್ರೀಯಳ ವಿವಾಹಿತ ಇಲ್ಲವೆ ಅವಾಹಿತ ಸ್ಥಿತಿಯನ್ನೂ, ನಿಷಿದ್ಧಾನಿಷಿದ್ಧ ವಿವಾಹ ವಿಧಾನವನ್ನೂ, ಹಾಗೂ ಸ್ತ್ರೀಗೆ ಅನ್ವಯಿಸುವ ವಿಶಿಷ್ಟ ಕಾನೂನು ಸಂಪ್ರದಾಯ ವನ್ನೂ ಅನುಸರಿಸಿ, ಬೇರೆ ಬೇರೆಯಾಗಿರುತ್ತಿತ್ತು. ಹಿಂದೂ ಕಾನೂನಿನಲ್ಲಿ ಹೀಗೆ 'ಸ್ತ್ರೀಧನ' ಹನ್ನೊಂದು ವಿಧವಾಗಿ ಅನುಪ್ರಾಪ್ತವಾಗುವ ಏರ್ಪಾಡುಗಳಿವೆ. ಈ ಕಲಮು ಅವೆಲ್ಲವನ್ನೂ ರದ್ದುಪಡಿಸಿ ಹಿಂದೂ ಸ್ತ್ರೀ ಆಸ್ತಿಗೆ ಹೊಸದೂ, ಏಕರೂಪವೂ ಆದ ಒಂದೇ ಅನುಪ್ರಾಪ್ತಿ ಕ್ರಮವನ್ನು ವಿಧಿಸುತ್ತದೆ

## ೮೫ ಉಪ ಕಲಮು (೧) ಅನ್ವಯಿಸದ ಸಂದರ್ಭಗಳು

ಈ ಕಲಮಿನ ಉಪಕಲಮು (೧) ರಲ್ಲಿ ನಿರ್ದಿಷ್ಟ ಪಡಿಸಿದ ವಾರಸಾಕ್ರಮವು ಹಿಂದೂ ಸ್ತ್ರೀಯ ಕೆಳಗಿನ ಆಸ್ತಿಗಳಿಗೆ ಅನ್ವಯಿಸಲಾರದು :

[೧] ಹಿಂದೂ ಸ್ತ್ರೀಯು ಮಕ್ಕಳು ಅಥವಾ ಮೊಮ್ಮಕ್ಕಳಿಲ್ಲದೆ ಮೃತಳಾದರೆ, ಅವಳಿಗೆ ತನ ತಾಯಿ ತಂದೆ ಗಳಿಂದ ದಾಯಕವಾಗಿ ಬಂದ ಆಸ್ತಿಯು. ಇಂಥ ಆಸ್ತಿ ಗಂಡನಿಗೆ ವಾರಸಾ ಮುಟ್ಟಲಾರದು.

[೨] ಹಿಂದೂ ಸ್ತ್ರೀಯು ಮಕ್ಕಳು ಅಥವಾ ಮೊಮ್ಮಕ್ಕಳಿಲ್ಲದೆ ಮೃತಳಾದರೆ, ಅವಳಿಗೆ ಗಂಡ ಅಥವಾ ಗಂಡನ ತಂದೆಯಿಂದ ದಾಯವಾಗಿ ಬಂದ ಆಸ್ತಿಯು. ಇಂಥ ಆಸ್ತಿ ಗಂಡನ ವಾರಸದಾರರಿಗೆ ಮಾತ್ರ ಸಲ್ಲುವದು.

[೩] ಈ ಕಾಯ್ದೆ ಜಾರಿಗೆ ಬರುವ ಮೊದಲು ಮರುಮಕ್ಕತ್ತಯಂ ಅಥವಾ ಅಳಿಯ ಸಂತಾನ ಕಾನೂನು ಅನ್ವಯಿಸುತ್ತಿದ್ದ ಸ್ತ್ರೀಯರ ಆಸ್ತಿಯು. ಈ ಬಗ್ಗೆ ೧೭ನೆಯ ಕಲಮು ವಿಶೇಷ ಏರ್ಪಾಡುಗಳನ್ನು ಮಾಡಿದೆ.

## ೮೬ ಹಿಂದೂ ಸ್ತ್ರೀಯಳ ವಾರಸಾ ಕ್ರಮ

ಮೇಲಿನ ಟಿಪ್ಪಣಿಯಲ್ಲಿ ನಿರ್ದಿಷ್ಟ ಪಡಿಸಿದ ವಿನಾಯತಿಗಳನ್ನು ಬಿಟ್ಟರೆ, ಉಳಿದೆಲ್ಲಕಡೆ ಅಮೃತ್ಯುಲೇಖೀಯಳಾಗಿ ಮೃತಳಾಗುವ ಹಿಂದೂ ಸ್ತ್ರೀಯ ಆಸ್ತಿಯ ಅನುಪ್ರಾಪ್ತಿಕ್ರಮ ಕೆಳಗಿನಂತಿದೆ:

(೧) ಅ] ಪುತ್ರರು ಬ] ಪುತ್ರಿಯರು ಕ] ಪೂರ್ವಮೃತ ಪುತ್ರ ಪುತ್ರಿಯರ ಮಕ್ಕಳು ಮತ್ತು ಡ] ಪತಿ

(೨) ಪತಿಯ ವಾರಸದಾರರು.

(೩) ತಾಯಿ ಮತ್ತು ತಂದೆ.

(೪) ತಂದೆಯ ವಾರಸದಾರರು.

(೫) ತಾಯಿಯ ವಾರಸದಾರರು.

ವಾರಸದಾರರನ್ನು ಐದು ಗುಂಪುಗಳಲ್ಲಿ ವಿಭಾಗಿಸಲಾಗಿದೆ. ಒಂದೇ ಗುಂಪಿನಲ್ಲಿಯ ಎಲ್ಲ ವಾರಸದಾರರು ದಾಯವನ್ನು ಒಮ್ಮೆಲೇ ತೆಗೆದುಕೊಳ್ಳುತ್ತಾರೆ. ಈ ಐದು ಗುಂಪುಗಳನ್ನು ನಿರ್ದಿಷ್ಟ ಪಡಿಸಿದ ಕ್ರಮದಲ್ಲೇ ಅವರಲ್ಲಿಯ ಪ್ರಾಶಸ್ತ್ಯ ಕ್ರಮವುಂಟು. ಎಂದರೆ, ಮೊದಲನೆಯ ಗುಂಪಿನವರು ಎರಡನೆ ಗುಂಪಿನವರನ್ನು ವ್ಯಾವರ್ತಿಸುತ್ತಾರೆ. ಎರಡನೆಯ ಗುಂಪಿನವರು ಮೂರನೆಯ ಗುಂಪಿನವರನ್ನು ವ್ಯಾವರ್ತಿಸುತ್ತಾರೆ. ಇದೇ ರೀತಿಯಾಗಿ ಕೊನೆಯ ಗುಂಪಿನವರೆಗೂ ಮೊದಲಿನ ಗುಂಪಿನವರು ನಂತರದ ಗುಂಪನ್ನು ವ್ಯಾವರ್ತಿಸಿ ವಾರಸಾ ಪಡೆಯುತ್ತಾರೆ.

## ೮೭ ಉಪಕಲಮು (೨)

ಈ ಉಪಕಲಮಿನಲ್ಲಿ ಹಿಂದೂಸ್ತ್ರೀಯ ಸಾಮಾನ್ಯ ವಾರಸಾಕ್ರಮಕ್ಕೆ ಕೆಲವು ಅಪವಾದಗಳ ಏರ್ಪಾಡಿದೆ. ಹಿಂದೂ ಸ್ತ್ರೀಯು ಪುತ್ರ ಪುತ್ರಿ ಅಥವಾ ಪೂರ್ವ ಮೃತ ಪುತ್ರ ಪುತ್ರಿಯರ ಮಕ್ಕಳು ಇವರನ್ನು ಹಿಂದೆ ಬಿಡದೆ ಮೃತಳಾದರೆ, ಅವಳು ಬಿಟ್ಟ ಆಸ್ತಿ ತಂದೆ ತಾಯಿಗಳಿಂದ ಬಂದುದಾದರೆ, ಅದು ತಂದೆಯ ವಾರಸದಾರರಿಗೆ ಸಲ್ಲತಕ್ಕದ್ದು. ಅಂಥ ಆಸ್ತಿ ಗಂಡ ಅಥವಾ ಗಂಡನ ತಂದೆಯಿಂದ ಬಂದುದಾದರೆ, ಅದು ಗಂಡನ ವಾರಸದಾರರಿಗೆ ಸಲ್ಲತಕ್ಕದ್ದು. ಈ ಎರಡು ಸನ್ನಿವೇಶಗಳಲ್ಲಿ ಹಿಂದಿನ ಟಿಪ್ಪಣಿಯ ೧ನೆಯ ಮತ್ತು ೨ನೆಯ ಗುಂಪಿನ ವಾರಸದಾರರು ಉಳಿದೆಲ್ಲರನ್ನೂ ವ್ಯಾವರ್ತಿಸಿ ಹಿಂದೂ ಸ್ತ್ರೀ ಅಮೃತ್ಯುಲೇಖೀಯಗಳ ಆಸ್ತಿಯನ್ನು ಪಡೆಯುತ್ತಾರೆ.

ಸಾಂಸತ್ತಿಕ ಸಂಯುಕ್ತ ಸಮಿತಿಯವರು ಈ ಏರ್ಪಾಡು ಮಾಡಿದ ಕಾರಣವೇನೆಂದು ವಿಶದ ಪಡಿಸುತ್ತ ಹೇಳುವದೇನೆಂದರೆ : “ಕ್ಲಾಜ ೧೭ ಹಿಂದೂಸ್ತ್ರೀಯ ವಾರಸಾ ಕ್ರಮವನ್ನು ಪರಿಷ್ಕರಿಸುತ್ತ ಸಂಯುಕ್ತ ಸಮಿತಿಯವರು ಸಂತತಿ ಇಲ್ಲದೆ ಮೃತಳಾದ ಹಿಂದೂ ಸ್ತ್ರೀಯ ಆಸ್ತಿಯು ತಂದೆ ತಾಯಿಗಳಿಂದ ಪ್ರಾಪ್ತವಾಗಿದ್ದರೆ, ತಂದೆಯ ವಾರಸದಾರನಿಗೂ ಗಂಡ-ಮಾವಂದಿರಿಂದ ಪ್ರಾಪ್ತವಾಗಿದ್ದರೆ, ಗಂಡನ ವಾರಸದಾರರಿಗೂ ಮುಟ್ಟತಕ್ಕದ್ದೆಂದು ಏರ್ಪಾಡು ಮಾಡಿದೆ. ಇಂಥ ಏರ್ಪಾಡಿನಿಂದ ನ್ಯಾಯವಾಗಿ ಯಾರಿಗೆ ಆಸ್ತಿ ಹೋಗಕೂಡದೊ, ಅಂಥವರಿಗೆ ಅದು ಹೋಗುವುದು ನಿಲ್ಲುವದೆಂದು ಸಂಯುಕ್ತ ಸಮಿತಿಯವರ ಅಭಿಪ್ರಾಯ ವಾಗಿದೆ.”

## ಕ. ೧೬

**ಹಿಂದೂ ಸ್ತ್ರೀಯಳ ವಾರಸದಾರರಲ್ಲಿ ವಾರಸಾಕ್ರಮ ಮತ್ತು ಆಸ್ತಿ ವಿಭಜನೆಯ ರೀತಿ.**

೧೫ನೇಯ ಕಲಮಿನಲ್ಲಿ ನಿರ್ದೇಶಿಸಲ್ಪಟ್ಟ ವಾರಸದಾರರಲ್ಲಿಯ ವಾರಸಾಕ್ರಮವೂ ಮತ್ತು ಅವರಲ್ಲಿ ಅಮೃತ್ಯುಲೇಖೀಯಳ ಆಸ್ತಿಯ ವಿಭಜನೆಯೂ ಕೆಳಗಿನ ನಿಯಮಗಳಿಗನುಸಾರ ನಡೆಯತಕ್ಕದ್ದು:-

**ನಿಯಮ ೧**—೧೫ನೇಯ ಕಲಮಿನ ಉಪಕಲಮು [೧]ರಲ್ಲಿ ನಿರ್ದಿಷ್ಟರಾದ ವಾರಸದಾರರಲ್ಲಿ ಯಾವುದೇ ಒಂದು ಯಾದಿಯಲ್ಲಿನ ವಾರಸದಾರರು, ಅದರ ನಂತರದ ಯಾದಿಯಲ್ಲಿನವರಮೇಲೆ ಪ್ರಾಶಸ್ತ್ಯ ಪಡೆಯತಕ್ಕದ್ದು; ಮತ್ತು ಒಂದೇ ಯಾದಿಯಲ್ಲಿನ ಎಲ್ಲರೂ ಒಮ್ಮೆಲೇ ವಾರಸಾ ಪಡೆಯತಕ್ಕದ್ದು.

**ನಿಯಮ ೨**—ಅಮೃತ್ಯುಲೇಖೀಯಳ ಮರಣಕಾಲದಲ್ಲಿ, ಅವಳ ಪೂರ್ವಮೃತ ಪುತ್ರ ಅಥವಾ ಪುತ್ರಿಯ ಮಕ್ಕಳು ಜೀವಂತರಾಗಿದ್ದರೆ, ಇಂಥ ಪುತ್ರನ ಮಕ್ಕಳು ಅಥವಾ ಪುತ್ರಿಯ ಮಕ್ಕಳು, ಅಮೃತ್ಯುಲೇಖೀಯಳ ಮರಣಕಾಲದಲ್ಲಿ ಆ ಪುತ್ರ ಇಲ್ಲವೆ ಪುತ್ರಿ ಜೀವಂತರಿದ್ದರೆ ಎಷ್ಟು ಪಾಲು ಪಡೆಯುತ್ತಿದ್ದರೋ, ಅಷ್ಟನ್ನು ಪಡೆಯತಕ್ಕದ್ದು.

**ನಿಯಮ ೩**—ಉಪಕಲಮು [೧] ರ ಕ್ಲಾಜ [ಬ] [ಡ] ಮತ್ತು [ಈ] ಗಳಲ್ಲಿಯ ಮತ್ತು ಉಪಕಲಮು [೨] ರಲ್ಲಿಯ ವಾರಸದಾರರಿಗೆ ಅಮೃತ್ಯುಲೇಖೀಯಳ ಆಸ್ತಿಯು-ಆಸ್ತಿಯು ಸ್ವತಃ ತಂದೆಯದು, ತಾಯಿಯದು ಅಥವಾ ಗಂಡನದಾಗಿದ್ದು, ಅವರು ಅಂಥ ಆಸ್ತಿಯನ್ನು ಕುರಿತು ಅಮೃತ್ಯುಲೇಖೀಯಳ ಮರಣನಂತರವೇ ಅಮೃತ್ಯುಲೇಖೀಯರಾಗಿ ಮೃತರಾಗಿದ್ದರೆ, ಅಂಥ ಆಸ್ತಿಯು ಸಂದರ್ಭಾನುಸಾರವಾಗಿ ಯಾವ ಕ್ರಮದಲ್ಲಿ ಮತ್ತು

ಯಾವ ನಿಯಮಗಳಿಗನ್ವಯ ಅನುಪ್ರಾಪ್ತವಾಗುತ್ತಲಿತ್ತೋ, ಅದೇ ಕ್ರಮ ಮತ್ತು ನಿಯಮಗಳಿಗನ್ವಯ ಅನುಪ್ರಾಪ್ತ ವಾಗತಕ್ಕದ್ದು.

## ಟೀಕೆ

### ೧ ವ್ಯಾಪ್ತಿ

ಈ ಕಲಮು ಹಿಂದೂಸ್ತ್ರೀಯ ೧೫ ನೆಯ ಕಲಮಿನ ವಾರಸದಾರರಲ್ಲಿ ವಾರ ಸಾಪ್ರಾಪ್ತಿಯಕ್ರಮ ಮತ್ತು ಆಸ್ತಿ ವಿಭಜನೆಯ ನಿಯಮಗಳನ್ನು ನಿರ್ದಿಷ್ಟಪಡಿಸು ತ್ತದೆ. ಈ ನಿಯಮಗಳಿಂದ ಹಿಂದೂ ಕಾನೂನಿನ ವಿವಿಧ ಸ್ತ್ರೀಧನ ವಾರಸಾಪ್ರಾಪ್ತಿ ಕ್ರಮಗಳು ರದ್ದಾಗುತ್ತವೆ.

ನಿಯಮ [೧]

೧೫ನೆಯ ಕಲಮಿನಲ್ಲಿ ಹಿಂದೂಸ್ತ್ರೀಯ ವಾರಸದಾರರನ್ನು ಐದು ಗುಂಪು ಅಥವಾ ಯಾದಿಗಳಾಗಿ ವಿಭಾಗಿಸಿದ್ದುದನ್ನು ಈ ಮೊದಲು ವಿವೇಚಿಸಲಾಗಿದೆ. ಈ ಯಾದಿಗಳನ್ನು ನಿರ್ದಿಷ್ಟಪಡಿಸಿದ ಕ್ರಮದಲ್ಲೇ ವಾರಸಾಪ್ರಾಪ್ತಿಯ ಪ್ರಾಶಸ್ತ್ಯಕ್ರಮ ವಿದ್ದು, ಯಾವುದೇ ಒಂದು ಯಾದಿಯ ವಾರಸದಾರರು ತನ್ನನಂತರದ ಯಾದಿಯ ವಾರಸದಾರರನ್ನು ವ್ಯಾವರ್ತಿಸುತ್ತಾರೆ. ಉದಾಹರಣೆಗೆ, ಮೃತನಿಗೆ ಪೂರ್ವಮೃತ ಪುತ್ರಿಯಮಗ ಮತ್ತು ಸೋದರರು, ಉಳಿದಿರುವ ಸಂಬಂಧಿಕರೆನ್ನೋಣ. ಮೊದಲನೆ ಯವನು ೧ ನೆಯ ಯಾದಿಯ ವಾರಸದಾರನಾದ್ದರಿಂದ; (೪) ನೇ ಯಾದಿಯ ಮೃತನ ಸೋದರನನ್ನು ವ್ಯಾವರ್ತಿಸಿ ವಾಸಾ ಪಡೆಯುತ್ತಾನೆ.

ಒಂದೇ ಯಾದಿಯಲ್ಲಿ ಬರುವ ಎಲ್ಲ ವಾರಸದಾರರು ಒಮ್ಮೆಲೇ ವಾರಸಾ ಪಡೆಯುತ್ತಾರೆ. ಉದಾಹರಣೆಗೆ ಅಮೃತ್ಯುಲೇಖೀಯಳ ನಂತರ ಅವಳ ಮಗ ಮಗಳು ಮತ್ತು ಗಂಡ ಉಳಿದಿದ್ದಾರೆನ್ನೋಣ. ಅವರೆಲ್ಲ ಒಂದನೆಯ ಯಾದಿಯ ವಾರಸದಾರರಾಗಿದ್ದು, ಮೃತಳ ಆಸ್ತಿಯನ್ನು ತಲಾ ಒಂದು ಪಾಲಿನಂತೆ ವಿಭಾಗಿಸಿ ಕೊಂಡು ಆಸ್ತಿಯ ⅓ ಭಾಗವನ್ನು ಪ್ರತಿಯೊಬ್ಬರು ಪಡೆಯುತ್ತಾರೆ.

ನಿಯಮ [೨]

ಈ ನಿಯಮದನ್ವಯ ಪೂರ್ವ ಮೃತ ಪುತ್ರ ಅಥವಾ ಪುತ್ರಿಯ ಮಕ್ಕಳು (೧ನೇಯಾದಿಯ ವಾರಸದಾರರು) ಆಸ್ತಿಯಲ್ಲಿ ಶಾಖಾನುಸಾರವಾಗಿ (Per stirpes) ಪಾಲು ಪಡೆಯತ್ತಾರೆ. ಉದಾಹರಣೆಗೆ ಮೃತಳ ನಂತರ (೧) ಅ, ಮತ್ತು ಬ ಎಂಬ

ಇಬ್ಬರು ಪುತ್ರರು ೨) ಕ, ಎಂಬ ಮಗಳು (೩) ಪೂರ್ವ ಮೃತನಾದ ಡ, ಎಂಬ ಮಗನ ಇಬ್ಬರು ಪುತ್ರರು ಮತ್ತು (೪) ಪೂರ್ವ ಮೃತಳಾದ ಈ, ಎಂಬ ಮಗಳ ಮೂವರು ಪುತ್ರಿಯರು ಉದಿಳಿದ್ದಾರೆನ್ನೋಣ. ಇವರೆಲ್ಲ ೧ನೆಯ ಯಾದಿಯ ವಾರಸದಾರರಾದ್ದರಿಂದ ಎಲ್ಲರೂ ಏಕಕಾಲದಲ್ಲಿ ವಾರಸಾ ಪಡೆಯುತ್ತಾರೆ. ಅ, ಬ, ಕ ಇವರಿಗೆ ಒಂದೊಂದು ಪಾಲೂ, ಡ ಹಾಗೂ ಈ ಇವರ ಶಾಖೆಗೊಂದರಂತೆ ಎರಡು ಪಾಲೂ ಒಟ್ಟು ಆಸ್ತಿಯಲ್ಲಿ ಐದು ಪಾಲುಗಳಾಗುತ್ತವೆ. 'ಡ' ನ ಶಾಖೆಗೆ ದೊರೆತ ⅕ ಪಾಲಿನಲ್ಲಿ ಆತನ ಮಕ್ಕಳು ಸಮನಾಗಿ ಹಂಚಿಕೊಳ್ಳುತ್ತಾರೆ. 'ಈ' ಳ ಶಾಖೆಗೆ ದೊರೆತ ⅕ ಪಾಲನ್ನು ಆವಳ ಮಕ್ಕಳು ಸಮನಾಗಿ ಹಂಚಿಕೊಳ್ಳುತ್ತಾರೆ.

## ನಿಯಮ [೩]

ಕೆಳಗಿನ ದೃಷ್ಟಾಂತಗಳಿಂದದ ಈ ನಿಯಮದ ಅನುಷ್ಠಾನ ವಿಧಾನ ಸ್ಪಷ್ಟ ನಾಗುತ್ತದೆ:

ಅ) ಅಮೃತ್ಯು ಲೇಖೀಯಳ ನಂತರ ಉಳಿದ ವಾರಸದಾರರೆಂದರೆ: (೧) ಸೋದರ (ತಂದೆಯ ಮಗ) ೨) ಇಬ್ಬರು ಸೋದರಿಯರು(ತಂದೆಯ ಪುತ್ರಿಯರು) (೩) ಮಲತಾಯಿ (ತಂದೆಯ ವಿಧವೆ,) (೪) ಪೂರ್ವ ಮೃತ ಸೋದರನ ಇಬ್ಬರು ಪುತ್ರರು (ತಂದೆಯ ಪುತ್ರನ ಪುತ್ರರು) (೫) ಪೂರ್ವ ಮೃತ ಸೋದರಿಯ ಮಗಳು (ತಂದೆಯ ಮಗಳ ಮಗಳು) (೬) ಕಕ್ಕ (ತಂದೆಯ ಸೋದರ) ಮತ್ತು (೭) ಮಲ ತಂದೆ. ಮೊದಲನೆಯ ಆರು ಜನ ತಂದೆಯ ವಾರಸದಾರರಾಗಿದ್ದು, ಕಲಮು (೧೫) ರ ನಾಲ್ಕನೇಯ (ಡ ಯಾದಿಯಲ್ಲಿ ಬರುತ್ತಾರೆ. ಏಳನೆಯವನು ತಾಯಿಯ ವಾರಸದಾರನಾಗಿದ್ದು ೧೫ನೆಯ ಕಲಮಿನ ಐದನೆಯ ಯಾದಿಯಲ್ಲಿ ಬರುತ್ತಾನೆ. ನಾಲ್ಕ ನೆಯಯಾದಿಯವರು ಐದನೆಯಯಾದಿಯ ಮಲತಂದೆಯನ್ನು ವ್ಯಾವರ್ತಿಸುತ್ತಾರೆ. ಇನು ೪ನೆಯ ಯಾದಿ ಕ.೧೫) ಯ ಆರುಜನರಲ್ಲಿ, ಮೊದಲನೆಯ ಐವರು ಪರಿಶಿಷ್ಟದ ೧ನೆಯ ವರ್ಗದವರಾಗಿದ್ದು, ಆರನೆಯವನು ೨ನೆಯ ವರ್ಗಕ್ಕೆ ಸೇರಿದವನಾಗಿದ್ದಾನೆ. ಕಾರಣ ಮೊದಲಿನ ಐವರು, ಆರನೆಯವನ ಮೇಲೆ ಪ್ರಾಶಸ್ತ್ಯ ಪಡೆಯುತ್ತಾರೆ.

ಇನ್ನು, ಈ ಐವರಲ್ಲಿ ಆಸ್ತಿಯು ಸಮನಾಗಿ ಹಂಚಿಕೆಯಾಗುವದಿಲ್ಲ. ಸೋದರ, ಇಬ್ಬರು ಸೋದರಿಯರು ಮತ್ತು ಮಲತಾಯಿ, ಒಂದೊಂದು ಪಾಲು ಪಡೆಯು ತ್ತಾರೆ; ಪೂರ್ವಮೃತ ಸೋದರನ ಇಬ್ಬರು ಮಕ್ಕಳುಕೂಡಿ ಒಂದು ಪಾಲು ಪಡೆ ಯುತ್ತಾರೆ. ಪೂರ್ವಮೃತ ಸೋದರಿಯ ಮಗಳು ಒಂದು ಪಾಲು ಪಡೆಯುತ್ತಾಳೆ. ಕಾರಣ ಆಸ್ತಿಯು ⅙, ⅙, ⅙, ⅙, ೧⁄೧೨ ೧⁄೧೨ ಮತ್ತು ⅙ ಪ್ರಮಾಣದಲ್ಲಿ ಹಂಚಿಹೋಗು ತ್ತದೆ.

ಇದೇ ರೀತಿಯಾಗಿ, ಗಂಡನ ಮತ್ತು ತಾಯಿಯ ವಾರಸದಾರರೂ ವಾರಸಾ ಪಡೆಯುತ್ತಾರೆ.

## ಕ. ೧೭

ಮರುಮಕ್ಕತ್ತಾಯಂ ಮತ್ತು ಅಳಿಯಸಂತಾನ ಕಾನೂನಿಗಂಕಿತರಾಗಿದ್ದ ವ್ಯಕ್ತಿಗಳಿಗಾಗಿ ವಿಶೇಷ ಏರ್ಪಾಡುಗಳು

ಈ ಕಾಯ್ದೆ ಪಾಸಾಗದಿದ್ದಲ್ಲಿ ಮರುಮಕ್ಕತ್ತಾಯಂ ಇಲ್ಲವೆ ಅಳಿಯಸಂತಾನ ಕಾನೂನಿಗಂಕಿತರಾಗಿರುತ್ತಿದ್ದ ವ್ಯಕ್ತಿಗಳಿಗೆ; ಕಲಮು ೮, ೧೦,೧೫ಮತ್ತು ೨೩,ರ ಏರ್ಪಾಡ ಗಳು ಕೆಳಗಿನ ಬದಲಾವಣೆಗಳಾಗಿವೆಯೆಂಬಂತೆ ಅನ್ವಯಿಸತಕ್ಕದ್ದು:

[೧] ೮ನೆಯ ಕಲಮಿನ ಉಪಕ್ಲಾಜು [ಕ] ಮತ್ತು [ಡ] ಗಳಿದ್ದ ಸ್ಥಳದಲ್ಲಿ ಕೆಳಗಿನದನ್ನು ಸೇರಿಸತಕ್ಕದ್ದು:

"ಕ ಮೂರನೆಯದಾಗಿ, ಎರಡುವರ್ಗಗಳ ಯಾವುದೇ ವಾರಸದಾರರು ಇಲ್ಲದಿದ್ದ ಪಕ್ಷದಲ್ಲಿ, ಅತನ ಗಂಡುವಳಿಯ ಅಥವಾ ಹೆಣ್ಣುವಳಿಯ ಸಂಬಂಧಿಕರಿಗೆ,"

[೨] ೧೫ನೆಯ ಕಲಮಿನ ಉಪಕಲಮು [೧] ರ, [ಅ] ದಿಂದ [ಈ] ದವರೆಗಿನ ಕ್ಲಾಜುಗಳ ಸ್ಥಳದಲ್ಲಿ ಕೆಳಗಿನದನ್ನು ಸೇರಿಸತಕ್ಕದ್ದು:—

"ಅ ಮೊದಲನೆಯದಾಗಿ [ಪೂರ್ವಮೃತ ಪುತ್ರ ಅಥವಾ ಪುತ್ರಿಯ ಮಕ್ಕಳನ್ನೊಳಗೊಂಡು] ಪುತ್ರ ಅಥವಾ ಪುತ್ರಿಯರಿಗೆ;

ಬ ಎರಡನೆಯದಾಗಿ, ತಂದೆ ಮತ್ತು ಗಂಡ ಇವರಿಗೆ;

ಕ ಮೂರನೆಯದಾಗಿ, ತಾಯಿಯ ವಾರಸದಾರರಿಗೆ;

ಡ ನಾಲ್ಕನೆಯದಾಗಿ, ತಂದೆಯ ವಾರಸದಾರರಿಗೆ;

ಈ ಕೊನೆಯದಾಗಿ, ಗಂಡನ ವಾರಸದಾರರಿಗೆ.”

[೩] ೧೫ ನೆಯ ಕಲಮಿನ ಉಪಕಲಮು [೨] ರ ಕ್ಲಾಜ [ಅ]ಇಲ್ಲ ವೆಂದು ತಿಳಿಯತಕ್ಕದ್ದು.

[೪] ಕಲಮು ೨೩ ಇಲ್ಲವೆಂದು ತಿಳಿಯತಕ್ಕದ್ದು.



## ಟೀಕೆ

### ೮೯ ವ್ಯಾಪ್ತಿ

ಮರುಮಕ್ಕತ್ತಯಂ ಇಲ್ಲವೆ ಅಳಿಯಸಂತಾನ ಕಾನೂನು ಅನ್ವಯಿಸುವ ಹಿಂದೂ ಪುರುಷ ಅಥವಾ ಸ್ತ್ರೀಯರಿಗೆ ಅನ್ವಯಿಸುವ ವಿಶೇಷ ವಾರಸಾಕ್ರಮವನ್ನು ಈ ಕಲಮಿನಲ್ಲಿ ವಿಧಿಸಲಾಗಿವೆ. ಈ ವರ್ಗದವರಿಗೆ ಬೇರೊಂದು ವಾರಸಾ ಕ್ರಮ ವನ್ನು ವಿಧಿಸದೆ,ಕಲಮು ೮,೧೦.೧೫,ಹಾಗೂ೭೩ರ ಏರ್ಪಾಡುಗಳನ್ನೇ ಕೆಲವುಮಾರ್ಪಾ ಡುಗಳೊಂದಿಗೆ, ಅವರಿಗೆ ಅನ್ವಯಿಸತಕ್ಕದ್ದೆಂದು ಹೇಳಲಾಗಿದೆ. ನಂಬೂದ್ರಿ ಕಾನೂನಿಗಂಕಿತರಾದವರಿಗೆ ಈ ಮಾರ್ಪಾಡುಗಳು ಅನ್ವಯಿಸುವುದಿಲ್ಲ.

### ೯೦ ಕ್ಲಾಜ (೧)

ಈ ಕ್ಲಾಜು ಮರುಮಕ್ಕತ್ತಯಂ ಅಥವಾ ಅಳಿಯ ಸಂತಾನ ಕಾನೂನು ಅನ್ವಯಿಸುವ ಪುರುಷರ ವಾರಸಾ ಕ್ರಮದಲ್ಲಿ ಒಂದು ಬದಲಾವಣೆ ಮಾಡುತ್ತದೆ: ಕಲಮು (೮) ರ (ಕ) ಮತ್ತು (ಡ ಕ್ಲಾಜುಗಳ ಕ್ಲಾಜ (ಕ) ಎಂಬ ಒಂದೇ ಕ್ಲಾಜನ್ನು ಸೇರಿಸಿ, ಗಂಡುವಳಿಗರು ಮತ್ತು ಹೆಣ್ಣುವಳಿಗರು ಕೂಡಿಯೇ-ವಾರಸಾ ಪಡೆಯತಕ್ಕದ್ದೆಂದು ವಿಧಿಸುತ್ತದೆ. ಈ ಗಂಡುವಳಿಗರು ಮತ್ತು ಹೆಣ್ಣು ವಳಿಗರ ಒಂದೇ ಯಾದಿಯಲ್ಲಿನ ವಾರಸದಾರರಲ್ಲಿ ೧೨ನೆಯ ಕಲಮಿನನ್ವಯ ಪ್ರಾಶ ಸ್ತ್ಯಕ್ರಮ ಏರ್ಪಡುತ್ತದೆ.

#### ದೃಷ್ಟಾಂತ

ಮೃತನನಂತರ (೧) ಕಕ್ಕನ ಮಗನ ಮಗಳು ಮತ್ತು (೨) ತಂಗಿಯ ಮಗಳ ಮಗ ಉಳಿದಿದ್ದಾರೆನ್ನೋಣ. ಮೊದಲನೆಯವನಿಗೆ ಮೂರು ವಂಶಾಗ್ರಕ್ರಮ ಶ್ರೇಣಿ ಗಳೂ, ಮೂರು ವಂಶಾನುಕ್ರಮ ಶ್ರೇಣಿಗಳೂ ಉಂಟು. ಎರಡನೆಯವನಿಗೆ ಎರಡು ವಂಶಾಗ್ರಕ್ರಮ ಶ್ರೇಣಿಗಳು ಮತ್ತು ಮೂರು ವಂಶಾನುಕ್ರಮ ಶ್ರೇಣಿಗಳುಂಟು. ಮೊದಲನೆಯವ ಗಂಡುವಳಿಗ; ಎರಡನೆಯವ ಹೆಣ್ಣುವಳಿಗ. ಆದರೂ ಎರಡನೆ

ಯವನಿಗೆ ಕಡಿಮೆ ವಂಶಾಗ್ರಕ್ರಮ ಶ್ರೇಣಿಗಳಿವೆಯಾದ್ದರಿಂದ, ಆತನಿಗೆ ಗಂಡುವ ಳಿಗನಮೇಲೆ ಸಹ ಪ್ರಾಶಸ್ತ್ಯ ಸಿಕ್ಕುತ್ತದೆ.

## ೯೧ ಕ್ಲಾಜ (೨)

೧೫ ನೆಯ ಕಲಮಿನ ಉಪಕಲಮು (೧) ರ (ಅ) ದಿಂದ ಈ) ದ ವರೆಗಿನ ಕ್ಲಾಜುಗಳ ಸ್ಥಳದಲ್ಲಿ ಹೊಸ ಐದು ಕ್ಲಾಜುಗಳನ್ನು ಸೇರಿಸಿ ಕೆಳಗಿನ ಬದಲಾವಣೆ ಗಳನ್ನು ಮಾಡಲಾಗಿದೆ:

(೧) ಮೊದಲನೆಯ ಯಾದಿಯಲ್ಲಿ, ತಾಯಿಯು ಗಂಡನ ಬದಲಾಗಿ,ಮಗ ಹಾಗೂ ಮಗಳೊಡನೆ ವಾರಸಾ ಪಡೆಯುತ್ತಾಳೆ.

(೨) ಎರಡನೆಯ ಯಾದಿಯಲ್ಲಿ, ಗಂಡನ ವಾರಸದಾರರ ಬದಲು, ತಂದೆ ಮತ್ತು ಗಂಡ ಕೂಡಿ ವಾರಸಾ ಪಡೆಯುತ್ತಾರೆ.

(೩) ತಾಯಿಯ ವಾರಸದಾರರು, ಗಂಡನ ಮತ್ತು ತಂದೆಯ ವಾರಸ ದಾರರಿಗಿಂತ ಮೊದಲು ವಾರಸಾ ಪಡೆಯುತ್ತಾರೆ.

(೪) ತಂದೆಯ ವಾರಸದಾರರು ಗಂಡನ ವಾರಸದಾರರಿಗಿಂತ ಮೊದಲು ವಾರಸಾ ಪಡೆಯುತ್ತಾರೆ.

## ೯೨ ಕ್ಲಾಜ (೩)

ಸಂತತಿಯಿಲ್ಲದೆ ಮೃತಳಾದ ಹಿಂದೂಸ್ತ್ರೀಯ ಆಸ್ತಿ ಗಂಡನಾವಂದಿರಿಂದ ಬಂದುದಾದರೆ, ಅವರ ವಾರಸದಾರರಿಗೂ, ತಂದೆ ತಾಯಿಗಳಿಂದ ಬಂದುದಾದರೆ, ಅವರ ವಾರಸದಾರರಿಗೂ ವಾರಸಾ ಸಲ್ಲಬೇಕೆಂಬ ವಿಶೇಷ ಏರ್ಪಾಡನ್ನು ತೆಗೆದು ಹಾಕಲಾಗಿದೆ. ಕಾರಣ ಮರುಮಕ್ಕತ್ತಯಂ ಅಥವಾ ಅಳಿಯಸಂತಾನ ಕಾನೂನಿ ಗಂಕಿತರಾದ ಸ್ತ್ರೀಯರಿಗೆ ಆ ಏರ್ಪಾಡು ಅನ್ವಯಿಸುವದಿಲ್ಲ.

## ೯೩ ಕ್ಲಾಜ (೪)

ಇರುವ ಮನೆಯಲ್ಲಿ ಪಾಲು ಬೇಡುವ ಕುರಿತು ಸ್ತ್ರೀ ವಾರಸದಾರರ ಮೇಲೆ ಕಲಮು (೨೩) ವಿಧಿಸುವ ನಿರ್ಬಂಧಗಳನ್ನು ಈ ಕ್ಲಾಜು ತೆಗೆದು ಹಾಕುತ್ತದೆ. ಕಾರಣ ಮರುಮಕ್ಕತ್ತಯಂ ಇಲ್ಲವೆ ಅಳಿಯಸಂತಾನ ಕಾನೂನಿಗಂಕಿತರಾದ ಹಿಂದೂ ಸ್ತ್ರೀಯರ ವಾರಸಾಕ್ರಮದಲ್ಲಿ ಆ ನಿರ್ಬಂಧಗಳಿಗೆ ಸ್ಥಳವಿಲ್ಲ.

## ಕ. ೧೮

ಸಮಾನ ಮಾತಾಪಿತೃಕರಿಗೆ ಸಮಾನ ಮಾತೃಕರಮೇಲೆ ಪ್ರಾಶಸ್ತ್ಯ — ಅನ್ಮೃತ್ಯುಲೇಖೀಯನಿಗೆ ಸಮಾನ ಮಾತಾ ಪಿತೃಕತೆಯಿಂದ ಸಂಬಂಧಿತರಾದ ವಾರಸದಾರರಿಗೆ, ಸಮಾನ ಮಾತೃಕತೆಯಿಂದ ಸಂಬಂಧಿತರಾದ ವಾರಸದಾರರ ಮೇಲೆ ಪ್ರಾಶಸ್ತ್ಯವಿರತಕ್ಕದ್ದು; ಆದರೆ ಸಂಬಂಧ (Relationship)ದ ಸ್ವರೂಪವು ಮಿಕ್ಕ ಎಲ್ಲವಿಷಯಗಳಲ್ಲೂ ಅಭಿನ್ನವಾಗಿರತಕ್ಕದ್ದು.

### ಟೀಕೆ

### ೯೪ ವ್ಯಾಪ್ತಿ

ಈ ಕಲಮು ಹಿಂದಿನ ಹಿಂದೂ ಕಾನೂನು ಅನುಸರಿಸುತ್ತಿದ್ದ ಪ್ರಾಶಸ್ತ್ಯ ನಿಯಮವನ್ನೇ ಶಾಸನೀಕರಿಸುತ್ತದೆ, (ಗರುಡದಾಸ ವಿ. ಲಾಲದಾಸ AIR 1933 P C 141 ನೋಡಿ ). ಉಳಿದೆಲ್ಲ ವಿಷಯದಲ್ಲಿ ಅನ್ಮೃತ್ಯುಲೇಖೀಯ ವ್ಯಕ್ತಿಯೊಡನೆ ವಾರಸದಾರರ ಸಂಬಂಧವು ಒಂದೇ ಸ್ವರೂಪದ್ದಾಗಿರುವ ಪಕ್ಷದಲ್ಲಿ, ಸಮಾನ ಮಾತಾಪಿತೃಕ (full blood) ಸಂಬಂಧಿಕರಾದ ವಾರಸದಾರರು,ಸಮಾನ ಪಿತೃಕ (Half blood) ರಾದ ವಾರಸದಾರರ ಮೇಲೆ ಪ್ರಾಶಸ್ತ್ಯ ಪಡೆಯುತ್ತಾರೆ. ಕೆಳಗಿನ ಉದಾಹರಣೆಗಳಿಂದ ಈ ಕಲಮಿನ ಪ್ರಾಶಸ್ತ್ಯಯೋಜನೆ ಸ್ಪಷ್ಟವಾಗುತ್ತದೆ:

(೧) ಸಮಾನ ಮಾತಾಪಿತೃಕ ಸೋದರನು, ಸಮಾನಪಿತೃಕ ಪುತ್ರನಾದ ಸೋದರನ ಮೇಲೆ ಪ್ರಾಶಸ್ತ್ಯಪಡೆಯುತ್ತಾನೆ; ಆದರೆ, ಸಮಾನಪಿತೃಕ ಸೋದರನು ಸಮಾನ ಮಾತಾಪಿತೃಕ ಸೋದರನ ಮಗನಿಗಿಂತ ಮೊದಲು ವಾರಸಾ ಪಡೆಯುತ್ತಾನೆ. ಕಾರಣವೇನಂದರೆ, ಸೋದರನಮಗ ಸೋದರನಿಗಿಂತ ಒಂದುಶ್ರೇಣಿ ದೂರದ ಸಂಬಂಧಿಕನಾಗುತ್ತಾನೆ. ಅರ್ಥಾತ್ ಶ್ರೇಣಿ ವಿಷಯದಲ್ಲಿ ಸಂಬಂಧದ ಸ್ವರೂಪವು ಒಂದೇಯಾಗಿಲ್ಲ.

(೨) ಸಮಾನಪಿತೃಕ ಸಂಬಂಧಿಕನಾದ ಕಕ್ಕನು, ಸಮಾನ ಮಾತಾಪಿತೃಕ ಕಕ್ಕನ ಮಗನಿಗಿಂತ ಮೊದಲು ವಾರಸಾ ಪಡೆಯುತ್ತಾನೆ; ಯಾಕಂದರೆ, ಕಕ್ಕನಮಗನಿಗಿಂತ ಸಮೀಪದ ಸಂಬಂಧಿಕನಾಗುತ್ತಾನೆ.

(೩) ಸಮಾನ ಮಾತಾಪಿತೃಕ ಸೋದರನ ಮಗಳ ಮಗಳು. ಮತ್ತು ಸಮಾನ ಪಿತೃಕ ಸೋದರನ ಮಗಳ ಮಗಳು–ಇವರಲ್ಲಿ ಮೊದಲಿನವಳಿಗೆ ಪ್ರಾಶಸ್ತ್ಯ ದೊರೆಯುತ್ತದೆ. ಆದರೆ, ಮೊದಲನೆಯ ವಾರಸದಾರಳು, ಎರಡನೆಯ ವಾರಸದಾರ, ಸಮಾನಪಿತೃಕ ಸೋದರನ ಮಗಳ ಮಗನಾಗಿದ್ದ ಪಕ್ಷದಲ್ಲಿ ಮಾತ್ರ ಪ್ರಾಶಸ್ತ್ಯ ಪಡೆಯಲಾರಳು. ಕಾರಣವೇನೆಂದರೆ, ೧೪ ನೆಯ ಕಲಮಿನ ನಿಯಮ (೩)ರನ್ವಯ ಇವರಿಬ್ಬರೂ ಕೂಡಿಯೇ ವಾರಸಾ ಪಡೆಯುತ್ತಾರೆ.

## ೯೫ ಭಾರತೀಯ ವಾರಸಾ ಕಾಯ್ದೆ

ಭಾರತೀಯ ವಾರಸಾಕಾಯ್ದೆಯ ಕಲಮು ೨೭, ರನ್ವಯ ವಾರಸದಾರರಲ್ಲಿ ಸಮಾನ ಮಾತಾಪಿತೃಕತೆ ಅಥವಾ ಸಮಾನ ಪಿತೃಕತೆಯನ್ನವಲಂಬಿಸಿದ ಭೇದವು ನಿಷಿದ್ಧವೆನಿಸುತ್ತದೆ. ಕಾರಣ, ಆ ಕಾಯ್ದೆಯಕೆಳಗೆ, ಸಮಾನಪಿತೃಕ ಹಾಗೂ ಸಮಾನ ಮಾತಾಪಿತೃಕರಾದ ಅಣ್ಣ ತಮ್ಮಂದಿರು ಇಲ್ಲವೆ ಅಕ್ಕತಂಗಿಯರು, ಅನ್ಯುತ್ಯುಲೇಖೀಯ ವ್ಯಕ್ತಿಯಿಂದ ಸಮಾನಶ್ರೇಣಿಯ ಸಂಬಂಧಿಕರಾಗುವುದರಿಂದ, ದಾಯ ಪಡೆಯಲು ಸಮಾನಾಧಿಕಾರಿಗಳೆನಿಸುತ್ತಾರೆ, (ಸ್ಮಿಥ್ ವಿ. ಟ್ರೇಸಿ Mad 209).

## ಕ. ೧೯

**ಇಬ್ಬರು ಅಥವಾ ಹೆಚ್ಚು ವಾರಸದಾರರ ವಾರಸಾ ಪ್ರಾಪ್ತಿಯ ರೀತಿ**

ಅಪ್ರುತ್ಯುಲೇಖೀಯ ವ್ಯಕ್ತಿಯ ಆಸ್ತಿಗೆ ಇಬ್ಬರು ಅಥವಾ ಹೆಚ್ಚು ವಾರಸದಾರರು ಕೂಡಿ ವಾರಸಾ ಪಡೆದರೆ, ಅವರು ಆಸ್ತಿಯನ್ನು ಕೆಳಗಿನ ರೀತಿಯಲ್ಲಿ ಪಡೆಯತಕ್ಕದ್ದು:

ಅ ಈ ಕಾಯ್ದೆಯಲ್ಲಿ ಬೇರೆಯಾಗಿ ಸುವ್ಯಕ್ತವಾಗಿ ಏರ್ಪಡಿಸಿದಲ್ಲದೆ, ಆಸ್ತಿಯನ್ನು ತಲಾ ಒಂದು ಪಾಲಿನಂತೆ (Per capita) ಪಡೆಬೇಕಲ್ಲದೆ, ಬೊಡ್ಡೆಗೊಂದು ಪಾಲಿನಂತೆ (Per stirpes)ಯಲ್ಲ: ಮತ್ತು.

ಬ ಸಂಯುಕ್ತ ಗೇಣಿದಾರರೆಂದು ಪಡೆಯಬೇಕಲ್ಲದೆ ಸಮಾಯಿಕ ಗೇಣಿದಾರರೆಂದಲ್ಲ.

## ಟೀಕೆ

### ೯೩ ವ್ಯಾಪ್ತಿ

ಈ ಕಲಮಿನನ್ವಯ ಇಬ್ಬರು ಅಥವಾ ಹೆಚ್ಚುಜನ ಏಕಕಾಲದಲ್ಲಿ ವಾರಸಾ ಪಡೆಯತಕ್ಕದ್ದೆಂದು ಏರ್ಪಾಡಿಸಿರುವಾಗ, ಕಾಯ್ದೆಯಲ್ಲೇ ಬೇರೆ ರೀತಿಯಾಗಿ ಏರ್ಪಾಡಿದ್ದಲ್ಲದೆ, ಅವರೆಲ್ಲರೂ ಆಸ್ತಿಯನ್ನು ತಲೆಗೊಂದು ಪಾಲಿನಂತೆ ಹಂಚಿಕೊಳ್ಳತಕ್ಕದ್ದು; ಕಾಯ್ದೆಯು ಸುವ್ಯಕ್ತವಾಗಿ ಏರ್ಪಡಿಸಿದಲ್ಲಿ ಮಾತ್ರ ನಿಯಮಕ್ಕೆ ಅಪವಾದವೆಂದು ಬೊಡ್ಡೆವಾರು ಹಂಚಿಕೆ ನಡೆಯತಕ್ಕದ್ದು.

ಎರಡನೆಯದಾಗಿ ಏಕಕಾಲದಲ್ಲಿ ವಾರಸಾ ಪಡೆಯುವ ವಾರಸದಾರರಲ್ಲಿ ಶೇಷಾಧಿಕಾರಕ್ಕೆ ಅವಕಾಶವಿರತಕ್ಕದ್ದಲ್ಲ; ಅವರೆಲ್ಲ ಕೂಡಿಪಡೆಯುವ ದಾಯಪ್ರಾಪ್ತಿಯಲ್ಲಿ ಅವರವರ ಪಾಲುಗಳು ಭಿನ್ನವಾಗಿದ್ದು, ಅದನ್ನು ಅವರವರ ವಾರಸದಾರರೇ ವಾರಸಾಕ್ರಮದಿಂದ ಪಡೆಯುವ ಏರ್ಪಾಡುಮಾತ್ರ ಇರತಕ್ಕದ್ದು. ಶೇಷಾಧಿಕಾರಕ್ಕೆ ಅವಕಾಶವೀಯುವ ಸಮಾಯುಕ ಗೇಣಿದಾರಿಕೆಗೆ ಈ ಕಾಯ್ದೆಯ ಸಮ್ಮತಿಯಿಲ್ಲ; ಸಂಯುಕ್ತ ಗೇಣಿದಾರಿಕೆ ಮಾತ್ರ ಈ ಕಾಯ್ದೆಯನ್ವಯ ವಾರಸಾಪ್ರಾಪ್ತಿಯ ಸಾಮಾನ್ಯ ರೀತಿಯಾಗಿದೆ.

### ೯೪ ಸಮಾಯುಕ ಗೇಣಿದಾರಿಕೆ

ಸಮಾಯುಕ ಗೇಣಿದಾರಿಕೆ (Joint tenancy) ನಾಲ್ಕು ವಿಷಯಗಳಲ್ಲಿ ಸಮಾಯುಕವಾಗಿರುತ್ತದೆ. (೧) ಕಬ್ಜೆ (೨) ಬಾಧ್ಯತೆ Interest (೩) ಹಕ್ಕು, ಮತ್ತು (೪) ಹಕ್ಕಿನ ಪ್ರಾರಂಭ. ಸಮಾಯುಕ ಗೇಣಿದಾರರು ಒಂದೇ ಹಕ್ಕಿನಿಂದ ಉದ್ಭೂತವಾದ ಅವಿಭಕ್ತ ಸಮಾಯಕ ಬಾಧ್ಯತೆಗಳ ಧಾರಣಕಾರರಾಗಿರುತ್ತಾರೆ. ಮೂಲಹಕ್ಕು ಒಂದೆಯಾದ್ದರಿಂದ, ಸಮಾಯುಕ ಬಾಧ್ಯತೆಗಳ ಪ್ರಾರಂಭಕಾಲ ಒಂದೇ ಎಂದು ಬೇರೆಹೇಳುವ ಕಾರಣವಿಲ್ಲ.

ಹಕ್ಕಿನಲ್ಲಿನ ಬಾಧ್ಯತೆಯ ಪರಿಮಾಣಗಳ ವಿಷಯದಲ್ಲಿ ಸಮಾಯುಕ ಗೇಣಿದಾರರೆಲ್ಲ ಪರಸ್ಪರ ಸಮಾನಸ್ಕಂಧರು. ಆದರೆ, ಸಮಾಯುಕ ಗೇಣಿಯಲ್ಲಿನ ಬಾಧ್ಯತೆ ಅವಿಭಕ್ತವಾಗಿದ್ದು, ಪ್ರತ್ಯೇಕಿತ ಹಕ್ಕುಗಳಿಗೆ ಅಲ್ಲಿ ಅವಕಾಶವಿಲ್ಲ. ಕಾರಣ ಸಮಾಯುಕ ಗೇಣಿದಾರರ ಸಂಖ್ಯೆ ಹೆಚ್ಚು ಅಥವಾ ಕಡಿಮೆಯಾದಂತೆ, ಪ್ರತಿಯೊಬ್ಬರ ಸಮಾಯುಕ ಬಾಧ್ಯತೆಯ ಪರಿಮಾಣವೂ ವ್ಯತ್ಯಾಸವಾಗುತ್ತಿರುತ್ತದೆ. ಅವಿಭಕ್ತನಾದ ಒಬ್ಬ ಸಮಾಯುಕ ಗೇಣಿದಾರನ ಸಮಾಯುಕ ಬಾಧ್ಯತೆ, ಆತನ ಮರಣಾ

ನಂತರ ಆತನ ವಾರಸದಾರರಿಗೆ ವಾರಸಾರೀತ್ಯಾ ಪ್ರಾಪ್ತವಾಗದೆ, ಉಳಿದ ಗೇಣಿದಾರರಿಗೇ ಶೇಷಾಧಿಕಾರರೀತ್ಯಾ ಪ್ರಾಪ್ರವಾಗುತ್ತದೆ. ಹಿಂದೂ ಮಿತಾಕ್ಷರ ಏಕತ್ರ ಕುಟುಂಬದ ಸಮಾಯಕ ಆಸ್ತಿಯು ಸಮಾಯಕ ಗೇಣಿದಾರಿಕೆಯ ರೀತಿಯಲ್ಲಿ ಧಾರಣ ಮಾಡಲ್ಪಡುತ್ತದೆ. ಆದರೆ ನಿರ್ಮಾಣ ವಿಧಾನ, ಬಾಧ್ಯತೆಯ ಸ್ವರೂಪ ಹಾಗೂ ವ್ಯಾಪ್ತಿಗಳಲ್ಲಿ ಮಿತಾಕ್ಷರ ಸಮಾಯಕ ಬಾಧ್ಯಸ್ತಿಕೆ ಹಾಗೂ ಸಮಾಯಕ ಗೇಣಿದಾರಿಕೆಗಳಲ್ಲಿ ಕೆಲವು ವ್ಯತ್ಯಾಸಗಳಿವೆ. ಅವನ್ನು ಕೆಳಗೆ ಸಂಕ್ಷೇಪಿಸಲಾಗಿದೆ:

(೧) ಮಿತಾಕ್ಷರ ಸಮಾಯಕ ಬಾಧ್ಯಸ್ತಿಕೆಯು ಕಾನೂನಿನ ನಿರ್ಮಿತಿಯಾಗಿದ್ದು, ಅದರಲ್ಲಿಯ ಬಾಧ್ಯತೆ ಜನನಮಾತ್ರದಿಂದ ಅಸ್ತಿತ್ವದಲ್ಲಿ ಬರುತ್ತದೆ. ಸಮಾಯಕ ಗೇಣಿದಾರಿಕೆಯು ದಸ್ತಾವೇಜು (Deed) ಅಥವಾ ಮೃತ್ಯುಲೇಖಗಳಿಂದ ಮಾತ್ರ ನಿರ್ಮಿತವಾಗುವದಲ್ಲದೆ, ವಾರಸಾರೀತ್ಯಾ ಅಸ್ತಿತ್ವದಲ್ಲಿ ಬರಲಾರದು.

(೨) ಮಿತಾಕ್ಷರ ಸಮಾಯಕದಲ್ಲಿ ಕೇವಲ ಸಂಬಂಧಿಕರು ಸದಸ್ಯರಾಗಿರುತ್ತಾರೆ. ಸಮಾಯಕ ಗೇಣಿದಾರಿಕೆಯಲ್ಲಿ ಅಂಥ ನಿರ್ಬಂಧವಿಲ್ಲ

(೩) ಮಿತಾಕ್ಷರ ಸಮಾಯಕದಲ್ಲಿನ ಅವಿಭಕ ಸಮಾಯಕ ಬಾಧ್ಯತೆಯನ್ನು ಸಮಾಯಕಸ್ಥರು ಅನಿರ್ಬಂಧವಾಗಿ ವಿಲೇವಾರಿಮಾಡಲು ಸಾಧ್ಯವಿಲ್ಲ. ಅಂಥ ವಿಲೇವಾರಿ ಕೆಲವು ನಿರ್ಬಂಧಗಳಿಗೊಳಪಟ್ಟಿದೆ. ಸಮಾಯಕ ಗೇಣಿದಾರಿಕೆಯಲ್ಲಿನ ತಮ್ಮಪಾಲಿನ ಹಕ್ಕನ್ನು ಗೇಣಿದಾರರು ಅನಿರ್ಬಂಧವಾಗಿ ವಿಲೇವಾರಿ ಮಾಡಬಹುದು

(೪) ಮಿತಾಕ್ಷರ ಸಮಾಯಕದಲ್ಲಿನ ಅವಿಭಕ್ತ ಬಾಧ್ಯತೆಯ ಪರಿಮಾಣವು ಸಮಾಯಕದ ಸದಸ್ಯತ್ವನ್ನವಲಂಬಿಸಿ ವ್ಯತ್ಯಾಸಹೊಂದುತ್ತದೆ. ಆದರೆ, ಸಮಾಯಕ ಗೇಣಿದಾರಿಕೆಯಲ್ಲಿನ ಅವಿಭಕ್ತ ಬಾಧ್ಯತೆಮಾತ್ರ ನಿತ್ಯವೂ, ನಿಶ್ಚಿತವೂ, ಆಗಿರುತ್ತದೆ.

(೫ ಮಿತಾಕ್ಷರ ಸಮಾಯಕದಿಂದ ಸಮಾಯಕ ದಾರರ ಪತ್ನಿಯರು ಅಥವಾ ಮಕ್ಕಳು ಜೀವಿತಾಂಶ ಪಡೆಯಲು ಅಧಿಕಾರವಿದೆ. ಸಮಾಯಕ ಗೇಣಿಯಲ್ಲಿ ಇಂಥ ಅಧಿಕಾರಕ್ಕೆ ಅವಕಾಶವಿಲ್ಲ.

(೬) ಮಿತಾಕ್ಷರ ಸಮಾಯಕದ ಕೊನೆಯ ಏಕೈಕ ಸಮಾಯಕದಾರನು ಮೃತನಾದಾಗ, ಸಮಾಯಕ ಆಸ್ತಿಯು ಮೃತನ ವಾರಸದಾರರಿಗೆ ಮಾತ್ರ ಸಲ್ಲುತ್ತದೆ. ಸಂಯುಕ್ತ ಗೇಣಿದಾರಿಕೆಯು ಕೊನೆಯ ಗೇಣಿದಾರ ಮೃತನಾದ ನಂತರ, ಎಲ್ಲ ಗೇಣಿದಾರರ ವಾರಸದಾರಲ್ಲಿ ಹಂಚಿಕೆ ಯಾಗುತ್ತದೆ.

## ೯೮ ಸಂಯುಕ್ತ ಗೇಣಿದಾರಿಕೆ

ಸಂಯುಕ್ತ ಗೇಣಿದಾರಿಕೆ (Tenancy-in-common)ಯಲ್ಲಿ ಗೇಣಿದಾರರು ಆಸ್ತಿಯನ್ನು ಕೂಡಿಯೇ ಕಬ್ಜಾವಹಿವಾಟು ಮಾಡುವರಾದರೂ, ಅವರವರ ಹಕ್ಕುಗಳು ಭಿನ್ನವೂ, ಪ್ರತ್ಯೇಕವೂ ಆಗಿರುವುದರಿಂದ, ಅವೆಲ್ಲ ಒಂದೇ ಕಾಲಕ್ಕೆ ಅಸ್ತಿತ್ವದಲ್ಲಿಬರುವ ಕಾರಣವಿಲ್ಲ. ಅಂಥಏಕಕಾಲೀನ ಪ್ರಾರಂಭ ಒಂದೊಮ್ಮೆ ಕಂಡುಬಂದರೂ, ಅದು ಆಕಸ್ಮಿಕ ಘಟನೆಮಾತ್ರವಾಗಿರುವುದಲ್ಲದೆ, ಆವಶ್ಯಕ ಲಕ್ಷಣವಾಗಿರುವದಿಲ್ಲ. ಹಾಗೆಯೇ ಸಂಯುಕ್ತ ಗೇಣಿದಾರಿಕೆಯಲ್ಲಿ ಶೇಷಾಧಿಕಾರ ಅನುಪ್ರಾಪ್ತಿಗೆ ಅವಕಾಶವಿಲ್ಲ; ಮೃತ ಗೇಣಿದಾರನ ಪ್ರತ್ಯೇಕಹಕ್ಕು, ಪ್ರತ್ಯೇಕವಾಗಿ ಆತನ ವಾರಸದಾರರಿಗೇ ಸಲ್ಲುವದು. ಸಮಾಯಿಕ ಹಾಗೂ ಸಂಯುಕ್ತ ಗೇಣಿದಾರಿಕೆಗಳಲ್ಲಿ, ಸಾಮೂಹಿಕ ಕಬ್ಜಾವಹಿವಾಟಿನ ಹೊರತು ಬೇರಾವ ವಿಷಯದಲ್ಲೂ ಸಾಮ್ಯತೆ ಕಂಡುಬರುವದಿಲ್ಲ

ಸಮಾಯಿಕ ಗೇಣಿದಾರಿಕೆಯಲ್ಲಿ, ಒಬ್ಬ ಗೇಣಿದಾರನು ತನ್ನ ಅವಿಭಕ್ತ ಬಾಧ್ಯತೆಯನ್ನು ವಿಲೇವಾರಿ ಮಾಡುವ ಮೂಲಕ ಸಮಾಯಿಕ ಗೇಣಿದಾರಿಕೆಯ ಹಕ್ಕಿನ ಏಕತ್ವ (unity of title) ವನ್ನು ಕೊನೆಗೊಳಿಸಬಹುದು. ಹೀಗಾದ ಮೇಲೆಯೂ ಗೇಣಿದಾರಿಕೆಯ ಸಾಮೂಹಿಕ ಕಬ್ಜಾ ವಹಿವಾಟು ಮುಂದುವರೆದದ್ದಾದರೆ, ಮೊದಲು ಸಮಾಯಿಕ ಗೇಣಿದಾರಿಕೆಯಾಗಿದ್ದುದು, ಈಗ ಸಂಯುಕ್ತ ಗೇಣಿದಾರಿಕೆಯ ಸ್ವರೂಪ ತಳೆದ ಹಾಗಾಗುತ್ತದೆ.

## ೯೯ ಪಿತ್ರಾರ್ಜಿತ ಆಸ್ತಿ

ಮಿತಾಕ್ಷರ ಕಾನೂನು ಸಂಪ್ರದಾಯದಲ್ಲಿ ಮೃತ ಹಿಂದೂ ಪುರುಷನ ಆಸ್ತಿಯು ಆತನ ಪಿತ್ರಾರ್ಜಿತ ಆಸ್ತಿಯಾಗಿರುವ ವಟ್ಟಿಗೆ ಅದು ಏಕತ್ರ ಕುಟುಂಬದ ಆಸ್ತಿಯೆನಿಸುವದಲ್ಲದೆ, ಆತನ ಪುತ್ರ, ಪೌತ್ರ ಹಾಗೂ ಪ್ರಪೌತ್ರರಿಗೆ ಸಮಾಯಿಕ ಆಸ್ತಿಯೆಂದು ಪ್ರಾಪ್ತವಾಗುತ್ತದೆ. ಈ ಕಾಯ್ದೆಯಲ್ಲಿ ಕೆಲವೇ ನಿರ್ದಿಷ್ಟಪಡಿಸಿದ ಸನ್ನಿವೇಶಗಳನ್ನು ಹೊರತುಪಡಿಸಿ (ಕ. ೬ ರ ಪರಿಮಿತಿ), ಮಿತಾಕ್ಷರ ಸಮಾಯಿಕ ಆಸ್ತಿಯನ್ನು ರಕ್ಷಿಸಲಾಗಿದೆ. ಆ ಮಟ್ಟಿಗೆ ಮಿತಾಕ್ಷರ ಸಮಾಯಿಕದ ಶೇಷಾಧಿಕಾರ ಅನುಪ್ರಾಪ್ತಿ, ಸಮಾಯಿಕ ಗೇಣಿದಾರಿಕೆ, ಶಾಖಾವಾರು ಹಂಚಿಕೆ ಮೊದಲಾದವುಗಳಿಗೆ ಈ ಕಾಯ್ದೆಯಲ್ಲಿ ಅವಕಾಶವಿದೆ.

# ಕ. ೨೦

ಗರ್ಭಸ್ಥ ಮಗು ವಿನ ಹಕ್ಕು

ಅನ್ಮೃತ್ಯುಲೇಖೀಯ ವ್ಯಕ್ತಿಯ ಮರಣಕಾಲದಲ್ಲಿ ಗರ್ಭದಲ್ಲಿದ್ದು, ಮರಣಾನಂತರ ಜೀವಂತವಾಗಿ ಜನಿಸಿದ ಶಿಶುವು, ಆ ವ್ಯಕ್ತಿಯ ಮರಣಪೂರ್ವದಲ್ಲಿ ಜನಿಸಿರುವ ಹಾಗೆಯೇ ಆತನಿಗೆ ವಾರಸಾವಡೆಯಲು ಹಕ್ಕು ಪಡೆದಿರತಕ್ಕದ್ದು; ಮತ್ತು ಇಂಥ ಸಂದರ್ಭದಲ್ಲಿ ವಾರಸಾ ಆಸ್ತಿಯು ಅನ್ಮೃತ್ಯುಲೇಖೀಯ ವ್ಯಕ್ತಿಯ ಮರಣದ ದಿನಾಂಕದಿಂದಲೇ ಸಂಪ್ರಾಪ್ತ(Vested) ವಾಗಿದೆಯೆಂದು ಪರಿಗಣಿಸತಕ್ಕದ್ದು.

## ಟೀಕೆ

### ೧೧೦ ವ್ಯಾಪ್ತಿ

ಈ ಕಲಮಿನಲ್ಲಿ ಪಾಶ್ಚಿಮಾತ್ಯ ಪ್ರಪಂಚದ ಸರ್ವ ನ್ಯಾಯಶಾಸ್ತ್ರ ಸಂಪ್ರದಾಯಗಳೂ ಅಂಗೀಕರಿಸಿರುವ " Child en ventre sa mere " ಸೂತ್ರವನ್ನು ಶಾಸನೀಕರಿಸಲಾಗಿದೆ. ಇದೇ ಸೂತ್ರ ಭಾರತೀಯ ವಾರಸಾ ಕಾಯ್ದೆಯ ಕಲಮು ೩೭ (ಕ) ದಲ್ಲೂ ಶಾಸನರೂಪ ಧರಿಸಿದೆ. ಹಿಂದಿನ ಹಿಂದೂ ಕಾನೂನಿನಲ್ಲಿ ಸಹ ಈ ತತ್ವಕ್ಕೆ ಮನ್ನಣೆಯಿದ್ದು ಕಲ್ಕತ್ತಾ ಹೈಕೋರ್ಟಿನ ಜೋಗೇಶ್ವರ ವಿ. ರಾಮಚಂದ್ರ 23 Col 670 P.C. ಮತ್ತು ಮುಂಬಯಿ ಹೈಕೋರ್ಟಿನ ನರೋಜಿ ವಿ. ಫಿರೋಜಬಾಯಿ 23 Com 80, 99, ತೀರ್ಪುಗಳು ಈ ವಿಷಯದಲ್ಲಿ ಪ್ರಮುಖ ಭಾರತೀಯ ತೀರ್ಪುಗಳೆನಿಸಿವೆ.

### ೧೧೧ ಸುವ್ಯಕ್ತ ಮೃತ್ಯುಲೇಖೀಯ ನಿಷೇಧ

ಆದರೆ ಮೃತ್ಯುಲೇಖವೊಂದರಲ್ಲಿ ಮೃತವ್ಯಕ್ತಿಯು ತನ್ನ ಆಸ್ತಿಯು ತನ್ನ ಮರಣಕಾಲದಲ್ಲಿ ಪ್ರತ್ಯಕ್ಷ ಜನಿಸಿದ ಶಿಶುವಿಗೆ ಮುಟ್ಟತಕ್ಕದ್ದಲ್ಲವೆಂದು ಸುವ್ಯಕ್ತವಾಗಿ ನಿಷೇಧಿಸಿದ್ದರೆ ಗರ್ಭಸ್ಥ ಶಿಶುವನ್ನು ವಾರಸಾದಿಂದ ವ್ಯಾವರ್ತಿಸಬೇಕಾಗಬಹುದು. ಈ ವಿಷಯದಲ್ಲಿ ಭಾರತೀಯ ಹೈಕೋರ್ಟುಗಳ ಸ್ಪಷ್ಟ ನಿರ್ಣಯಗಳಾವವೂ ಲಭ್ಯವಿಲ್ಲವಾದರೂ ಈ ಅಭಿಪ್ರಾಯವನ್ನೇ ಪುಷ್ಟೀಕರಿಸುವ ಬ್ರಿಟಿಶ್ ನ್ಯಾಯನಿರ್ಣಯಗಳನೇಕ ಉಂಟು. In Re Emerys Estate 3 C.D. 300 ಇದು ಅವುಗಳಲ್ಲಿ ಪ್ರಮುಖವಾಗಿದೆ.

## ಕ. ೨೧

ಏಕಕಾಲದಲ್ಲಿ ಮರಣವಾದಾಗ ಮಾಡತಕ್ಕ ಗ್ರಹಿಕೆಗಳು

ಇಬ್ಬರು ವ್ಯಕ್ತಿಗಳು— ಇಬ್ಬರಲ್ಲೊಬ್ಬರು ಮೊದಲು ಮೃತರಾದರೆಂದಾಗಲೀ, ಮತ್ತು ಹಾಗಿದ್ದ ಪಕ್ಷದಲ್ಲಿ ಮೊದಲು ಮೃತರಾದವರು ಯಾರೆಂದಾಗಲೀ, ನಿಶ್ಚಿತವಾಗಿ ಹೇಳಲು ಅಸಾಧ್ಯವಿರುವ ಪರಿಸ್ಥಿತಿಯಲ್ಲಿ—ಮೃತರಾಗಿದ್ದರೆ, ಆಸ್ತಿಯ ವಾರಸಾಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳಿಗೋಸ್ಕರ, ತದ್ವಿರುದ್ಧವೆಂದು ಪ್ರಸ್ಥಾಪಿತವಾಗುವವರೆಗೂ, ಚಿಕ್ಕವನು [ಳು] ಹಿರಿಯನಾ[ಳಾ]ದವನ[ಳ] ನಂತರ ಬದುಕಿದ್ದನೆ[ಳೆ]ಂದು ಗ್ರಹಿಕೆ ಮಾಡತಕ್ಕದ್ದು.

### ಟೀಕೆ

### ೧೦೨ ವ್ಯಾಪ್ತಿ ಮತ್ತು ಉದ್ದೇಶ

ಬಹುತರ ಒಮ್ಮೆಲೇ ಮರಣಹೊಂದಿದ ಇಬ್ಬರಲ್ಲಿ ಯಾರು ನಂತರ ಸತ್ತರು, ಅರ್ಥಾತ್ ಯಾರು ಕೊನೆಗೆ ಜೀವಂತರಾಗಿದ್ದರೆಂಬ ಬಗ್ಗೆ ವಾದವಿರುವಾಗ ಈ ಕಲಮಿನನ್ವಯ, ವಯಸ್ಸಿನಲ್ಲಿ ಚಿಕ್ಕ ವ್ಯಕ್ತಿಯೇ ಕೊನೆಗೆ ಜೀವಂತನಾಗಿದ್ದನೆಂದು ಗ್ರಹಿಸಬೇಕಾಗುತ್ತದೆ. ಇಂಥ ಗ್ರಹಿಕೆಗೆ ಪೂರ್ವಭಾವಿಯಾಗಿ ಸತ್ತವರ ಮರಣ ಸಂದಿಗ್ಧ ಪರಿಸ್ಥಿತಿಯಲ್ಲಾಗಿರಬೇಕಾಗುತ್ತದೆ. ರೈಲು ಅಪಘಾತ, ವಿಮಾನ ಅಪಘಾತ, ಜಲಪ್ರಳಯ, ಮಹಾಪೂರ, ಭೂಕಂಪ, ಅಗ್ನಿಪ್ರಕೋಪ, ಯುದ್ಧ, ಬಾಂಬಿನಸ್ಫೋಟ ಮೊದಲಾದ ಸನ್ನಿವೇಶಗಳಲ್ಲಿ ಇಂಥ ಸಂದಿಗ್ಧ ಮರಣಗಳ ಸಾಧ್ಯತೆಯಿರುತ್ತದೆ. ತಂದೆ ಹಾಗೂ ಮಗ ಇಬ್ಬರೂ ವಿಮಾನ ಅಪಘಾತದಲ್ಲಿ ಸತ್ತರೆ, ಮೊದಲು ಯಾರುಸತ್ತರು, ನಂತರ ಯಾರೆಂದು ಹೇಳುವುದುಕಷ್ಟ. ಇಂಥ ಸನ್ನಿವೇಶದಲ್ಲಿ ಈ ಕಲಮು ಮಗನೇ ತಂದೆಯನಂತರ ಜೀವಂತನಿದ್ದನೆಂದು ಗ್ರಹಿಸಬೇಕೆಂದುವಿಧಿಸುತ್ತದೆ. ಕಾರಣ ಮಗನು,ತಂದೆಯಿಂದ, ವಾರಸಾಪಡೆಯುತ್ತಾನೆ;ಆದರೆ ಅಂಥದೇ ಸನ್ನಿವೇಶದಲ್ಲಿ ತಂದೆ ಮಗನ ವಾರಸಾ ಪಡೆಯಲಾರನು.

ಈ ಕಲಮಿಗೆ ಪೂರ್ವದಲ್ಲಿ ಇಂಥ ಗ್ರಹಿಕೆ ಭಾರತದ ಕಾನೂನು ಪದ್ಧತಿಗಳಲ್ಲಿ ಜಾರಿಯಲ್ಲಿರಲಿಲ್ಲ, (AIR 1934 Oudh 101 ನೆಕ್ರಿ ವಿ. ಜ್ವಾಲಾ).

ಯಾರು ಮೊದಲು ಸತ್ತರೆಂಬ ಬಗ್ಗೆ ಪುರಾವೆ ಸಮತೋಲಿತವಿರುವಾಗ, ಚಿಕ್ಕವನೇ ನಂತರ ಸತ್ತನೆಂಬ ಸಂಭವ ಹೆಚ್ಚೆಂದು ಮಾತ್ರ ಹೇಳಬಹುದಾಗಿತ್ತು. ( ದಿಗೇಂದ್ರ ವಿ. ಕುತಿನಿಯಾ AIR 1944 Col 132).

## ಕ. ೨೨

ಕ್ರಯಪ್ರಾಶಸ್ತ್ಯದ ಅಧಿಕಾರ

[೧] ಅನ್ಯೃತ್ಯುಲೇಖೀಯ ವ್ಯಕ್ತಿಯ ಸ್ಥಾವರ ಆಸ್ತಿಯಲ್ಲಿನ ಬಾಧ್ಯತೆಯಾಗಲಿ, ಅಥವಾ ಅವನು ಇಲ್ಲವೆ ಅವಳು ಒಂಟಿಯಾಗಿಯೋ, ಇನ್ನಿತರರೊಡನೆ ಕೂಡಿಯೋ ನಡೆಸುತ್ತಿರುವ ವ್ಯವಹಾರದಲ್ಲಿನ ಬಾಧ್ಯತೆಯಾಗಲಿ, ಈ ಕಾಯ್ದೆಯು ಜಾರಿಗೆ ಬಂದನಂತರ, ಪರಿಶಿಷ್ಟದ ೧ನೆಯ ವರ್ಗದಲ್ಲಿ ನಿರ್ದಿಷ್ಟರಾದ ಇಬ್ಬರು ಇಲ್ಲವೆ ಹೆಚ್ಚು ವಾರಸದಾರರಿಗೆ ಅನುಪ್ರಾಪ್ತವಾಗಿದ್ದು, ಇಂಥ ವಾರಸದಾರರಲ್ಲೊಬ್ಬರು ಆಸ್ತಿಯಲ್ಲಿನ ಅಥವಾ ವ್ಯವಹಾರದಲ್ಲಿನ ತಮ್ಮ ಬಾಧ್ಯತೆಯನ್ನು ವರ್ಗಾಯಿಸಲುದ್ಯುಕ್ತರಾದ ಪಕ್ಷದಲ್ಲಿ, ವರ್ಗಾಯಿಸಲ್ಪಡಲಿರುವ ಬಾಧ್ಯತೆಯನ್ನು ಪಡೆಯಲು ಉಳಿದ ವಾರಸದಾರರಿಗೆ ಪ್ರಾಶಸ್ತ್ಯಾಧಿಕಾರವಿರತಕ್ಕದ್ದು.

[೨] ಈ ಕಲಮಿನನ್ವಯವಾದ, ಮೃತನ ಆಸ್ತಿಯಲ್ಲಿನ ಬಾಧ್ಯತೆಯ ವರ್ಗಾವಣೆಯ ಪ್ರತಿಮಾನವು, ಕಕ್ಷಿಗಾರರಲ್ಲಿ ಒಡಂಬಡಿಕೆಯಾಗದಿದ್ದ ಪಕ್ಷದಲ್ಲಿ, ಈ ಬಗ್ಗೆ ಬಂದ ಅರ್ಜಿಯಮೇಲೆ ಕೋರ್ಟಿನಿಂದ ನಿರ್ಧರಿಸಲ್ಪಡತಕ್ಕದ್ದು; ಮತ್ತು ಹಾಗೆ ನಿರ್ಧಾರವಾದ ಪ್ರತಿಮಾನಕ್ಕಾಗಿ, ಬಾಧ್ಯತೆಯನ್ನು ಪಡೆಯಲುದ್ಯುಕ್ತನಾದ ವ್ಯಕ್ತಿಯು, ಅದನ್ನು ಪಡೆಯಲಿಚ್ಛಿಸದಿದ್ದರೆ, ಅವನು ಅರ್ಜಿಗೆ ಸಂಬಂಧಿಸಿದ ಯಾವತ್ತೂ ವೆಚ್ಚವನ್ನು ಕೊಡಲು ಜವಾಬ್ದಾರನಾಗತಕ್ಕದ್ದು.

[೩] ಪರಿಶಿಷ್ಟದ ೧ನೆಯ ವರ್ಗದಲ್ಲಿನ ಇಬ್ಬರು ಅಥವಾ ಹೆಚು

ಜನ ವಾರಸದಾರರು ಈ ಕಲಮಿನನ್ವಯ ಬಾಧ್ಯತೆಯನ್ನು ಪಡೆಯಲುದ್ಯುಕ್ತರಾಗಿದ್ದರೆ, ವರ್ಗವಣೆಗಾಗಿ ಅತಿಹೆಚ್ಚು ಪ್ರತಿಮಾನವನ್ನು ಕೊಡಮಾಡುವ ವಾರಸದಾರನಿಗೆ ಪ್ರಾಶಸ್ತ್ಯವೀಯತಕ್ಕದ್ದು.

ವಿವರಣೆ—ಈ ಕಲಮಿನಲ್ಲಿ "ಕೋರ್ಟು" ಎಂದರೆ, ಯಾವ ಕೋರ್ಟಿನ ಅಧಿಕಾರ ಕ್ಷೇತ್ರದಲ್ಲಿ ಸ್ಥಾವರ ಆಸ್ತಿ ಅಥವಾ ವ್ಯವಹಾರ ನೆಲೆಸಿದೆ ಇಲ್ಲವೆ ನಡೆಸಲ್ಪಡುತ್ತಿದೆಯೋ ಆ ಕೋರ್ಟು ಎಂದರ್ಥ; ರಾಜ್ಯಸರಕಾರವು ಈ ವಿಷಯಕ್ಕೋಸ್ಕರ, ಆಫೀಸಿಯಲ್ ಗೆಝೆಟಿನಲ್ಲಿ ನೋಟಿಫಿಕೇಶನ್ ಮೂಲಕ ನಿರ್ದಿಷ್ಟಪಡಿಸುವ ಕೋರ್ಟು ಇದರಲ್ಲಿ ಸಮಾವಿಷ್ಟವಾಗುತ್ತದೆ.

### ಟೀಕೆ

### ೧೧೩ ವ್ಯಾಪ್ತಿ ಮತ್ತು ಉದ್ದೇಶ

ಈ ಕಲಮಿನಲ್ಲಿ ಕ್ರಯ ಪ್ರಾಶಸ್ತ್ಯದ ಅಧಿಕಾರ (Right of Pri-emption) ತತ್ವವನ್ನು ಶಾಸನೀಕರಿಸಲಾಗಿದೆ. ಮಹ್ಮದೀಯ ಕಾನೂನಿನಲ್ಲಿ ಈ ತತ್ವ ಹೆಚ್ಚು ಪ್ರಚುರವಾಗಿದೆ. ಈ ಹಕ್ಕನ್ನು ವಿಧಿಸುವ ಮೂಲಕ ಅಮೃತ್ಯುಲೇಖೀಯ ಹಿಂದುಗಳ ಆಸ್ತಿ ಆದಷ್ಟು ಮಟ್ಟಿಗೆ ಅವರ ವಾರಸದಾರರ ವಶದಲ್ಲೇ ಉಳಿಯ ಬೇಕೆಂದೂ, ಅದು ಸಾಮಾನ್ಯವಾಗಿ ಪರರ ವಶಕ್ಕೆ ಹೋಗಕೂಡದೆಂದೂ ಉದ್ದೇಶಿಸಲಾಗಿದೆ. ಪರಿಶಿಷ್ಟದ ೧ ನೆಯ ವರ್ಗದ ವಾರಸದಾರರು ಕೂಡಿಯೇ-ಸಂಯುಕ್ತ ಗೇಣಿದಾರರಾಗಿ ಮೃತನ ಆಸ್ತಿಯನ್ನು ಪಡೆಯುವದರಿಂದ, ಅವರಲ್ಲೊಬ್ಬ ವಾರಸದಾರನ ಪಾಲು ಪರರ ವಶಕ್ಕೆ ಹೋದರೆ,ಉಳಿದವರಿಗೆ ಅನಾನುಕೂಲತೆಗಳಾಗುವ ಸಂಭವ ಯಾವಾಗಲೂ ಇದೆ. ಇಂಥ ಸಂಭವನೀಯ ಅನಾನುಕೂಲಗಳನ್ನು ನಿವಾರಿಸುವದೂ, ಈ ಕಲಮಿನ ಉದ್ದೇಶವಾಗಿರಲು ಸಾಕು, (ಮುಸಾಮತ್ ಗಿರಜ ಕನ್ವಾರ ವಿ. ಇರ್ಫಾನಲಿ A I R 1952 All 686).

### ೧೧೪ ಕ್ರಯ ಪ್ರಾಶಸ್ತ್ಯದ ಅಧಿಕಾ

ಈ ಕಾಯ್ದೆಯನ್ವಯ ಸಹ ವಾರಸದಾರರಿಗೆ ಲಭ್ಯವಾಗುವ ಕ್ರಯಪ್ರಾಶಸ್ತ್ಯದ ಹಕ್ಕು ಕೇವಲ ವೈಯಕ್ತಿಕವಾದ ಹಕ್ಕಾಗಿದ್ದು, ಅದು ಪರಿಶಿಷ್ಟದ ೧ ನೆಯ ವರ್ಗದ ವಾರಸದಾರರಿಗೆ ಮಾತ್ರ ಪರಸ್ಪರರ ವಿರುದ್ಧ ಲಭ್ಯವಿದೆ. ಇಂಥ ವಾರಸದಾ-

ಮೂಲಕ ಹಕ್ಕು ಕೇಳುವ ಉಳಿದ ವಾರಸದಾರರಿಗೆ ಈ ಹಕ್ಕು ಲಭ್ಯವಿಲ್ಲ. ಅರ್ಥಾತ್ ಈ ಕ್ರಯ ಪ್ರಾಶಸ್ತ್ಯಾಧಿಕಾರ ಆಸ್ತಿಗೆ ಅಂಟಿದ ಭಾರವಾಗಿರದೆ, ಕೆಲ ವಿಶಿಷ್ಟ ವರ್ಗದ ವ್ಯಕ್ತಿಗಳಿಗೆ ಮಾತ್ರ ಲಭ್ಯವಿರುವ ಹಕ್ಕಾಗಿದೆ. ಇದು ವೈಯಕ್ತಿಕ ಹಕ್ಕಾಗಿದ್ದರಿಂದ, ವ್ಯಕ್ತಿಗಳೊಡನೆ ಅವಸಾನ ಹೊಂದುತ್ತದೆ.

ಏಕ ಕಾಲದಲ್ಲಿ ವಾರಸಾ ಪಡೆಯುವ ಸಹ ವಾರಸದಾರರಿಗೆ ಲಭ್ಯವಿರುವ ಈ ಅಧಿಕಾರದಿಂದ, ಒಬ್ಬ ಸಹ ವಾರಸದಾರ ಇನ್ನೊಬ್ಬನ ಆಸ್ತಿಯನ್ನು ಕ್ರಯಿಸಲು ಬಲವಂತ ಪಡಿಸುವಹಾಗಿಲ್ಲ. ಸಹ ವಾರಸದಾರನೊಬ್ಬ ತನ್ನ ದಾಯಾಂಶವನ್ನು ಕ್ರಯಿಸಲುದ್ಯುಕ್ತನಾದಾಗ ಮಾತ್ರ, ಮಿಕ್ಕ ಸಹವಾರಸದಾರರಿಗೆ ಅದನ್ನು ಕುರಿತು ಕ್ರಯ ಪ್ರಾಶಸ್ತ್ಯಾಧಿಕಾರ ಬೇಡಲು ಹಕ್ಕು ಉಂಟಾಗುತ್ತದೆ. ಇದರಿಂದ ಹೊರಗಿನವನೊಬ್ಬ ಆಸ್ತಿಗೆ ಒಡೆಯನಾಗುವದು ತಪ್ಪುತ್ತದೆ.

ಮಿಕ್ಕ ಸಹ ವಾರಸದಾರರಲ್ಲಿ ಒಬ್ಬರಿಗಿಂತ ಹೆಚ್ಚು ಜನ ವಾರಸದಾರರು ಈ ಕ್ರಯ ಪ್ರಾಶಸ್ತ್ಯದ ಅಧಿಕಾರವನ್ನು ಪ್ರಯೋಗಿಸಿದ ಪಕ್ಷದ ಅವರಲ್ಲಿ ಎಲ್ಲಕ್ಕೂ ಹೆಚ್ಚು ಬೆಲೆಗೆ ದಾಯಾಂಶವನ್ನು ಬೇಡುವವನಿಗೆ ಅದನ್ನು ಕೊಡಬೇಕೆಂದು ಈ ಕಲಮು ವಿಧಿಸುತ್ತದೆ.

## ೧೦೫ ಪ್ರತಿಮಾನ (Consideration) ನಿರ್ಣಯ

ಈ ಕಾಯ್ದೆಯ ಕೆಳಗೆ ಪ್ರಾಶಸ್ತ್ಯಾಧಿಕಾರ ಕೇಳುವ ವ್ಯಕ್ತಿಗಳು ೧ ನೆಯ ವರ್ಗದಲ್ಲಿ ಬರುವ ಸಹ ವಾರಸದಾರರೋ ಎಂಬ ಬಗ್ಗೆ ವಿಚಾರಣೆಯಾದಮೇಲೆ ಎರಡನೆಯ ಮಹತ್ವದ ವಿಚಾರಣೆ ದಾಯಾಂಶದ ವರ್ಗಾವಣೆಗೋಸ್ಕರ ಪ್ರತಿಮಾನ ಅಥವಾ ಮೋಬದಲು ಎಷ್ಟೆಂಬ ಬಗ್ಗೆ ನಡೆಯಬೇಕಾಗುತ್ತದೆ.. ಇಂಥ ವಿಚಾರಣೆ ಸಂಬಂಧಿಸಿದ ಕಕ್ಷಿಗಳು ತಮ್ಮಲ್ಲಿ ಒಡಂಬಡಿಕೆಯ ಮೂಲಕ ಪ್ರತಿಮಾನದ ಮೊತ್ತವನ್ನು ನಿರ್ಧರಿಸಿಕೊಳ್ಳದಿದ್ದಲ್ಲಿ ಮಾತ್ರ ಅವಶ್ಯಕವಾಗುತ್ತದೆ. ಒಡಂಬಡಿಕೆಯಾಗದಿದ್ದರೆ ಕಕ್ಷಿಗಳಲ್ಲೊಬ್ಬರು ಪ್ರತಿಮಾನ ನಿರ್ಧಾರಕ್ಕೋಸ್ಕರ ಕೋರ್ಟಿಗೆ ಅರ್ಜಿ ಸಲ್ಲಿಸಿದಾಗ, ಕೋರ್ಟು ಅಂಥ ಅರ್ಜಿಯ ಮೇಲೆ ವರ್ಗಾವಣೆಯ ಪ್ರತಿಮಾನವನ್ನು ನಿರ್ಧರಿಸುತ್ತದೆ. ಒಮ್ಮೆ ಕೋರ್ಟು ಪ್ರತಿಮಾನದ ಮೊತ್ತವನ್ನು ನಿರ್ಧರಿಸಿದ ಮೇಲೆ ದಾಯಾಂಶವನ್ನು ಪಡೆಯಲುದ್ಯುಕ್ತನಾದ ಸಹ ವಾರಸದಾರನು ಅದನ್ನು ಪಡೆಯಲು ನಿರಾಕರಿಸಿದರೆ, ಅರ್ಜಿಯ ವೆಚ್ಚ ಅವನ ಮೇಲೆ ಬೀಳುತ್ತದೆ.

## ೧೦೬ ಕೋರ್ಟು ಎಂದರಾವುದು

ಈ ಕಲಮಿಗೋಸ್ಕರ ಪ್ರತಿಮಾನ ನಿರ್ಧರಿಸುವ ಕೋರ್ಟು ಎಂದರೆ ವರ್ಗಾ

ವಣೆಯಾಗಲಿರುವ ಸ್ಥಾವರ ಆಸ್ತಿ ಅಥವಾ ವ್ಯವಹಾರ ಯಾವ ಕೋರ್ಟಿನ ಅಧಿಕಾರಕ್ಷೇತ್ರದಲ್ಲಿ ನೆಲಿಸಿದೆಯೋ ಅಥವಾ ನಡೆಸಲ್ಪಡುವದೋ, ಅಂಥ ಕೋರ್ಟು ಎಂದರ್ಥ. ಈ ಕಾರ್ಯಕ್ಕೋಸ್ಕರ ರಾಜ್ಯ ಸರಕಾರದವರು ಯಾವದೇ ಕೋರ್ಟನ್ನು ವಿಶೇಷ ಕೋರ್ಟಾಗಿ ನಿಯಮಿಸ ಬಹುದು ಹಾಗೇ ಸರಕಾರ ಗೆಝೆಟನಲ್ಲಿ ನೋಟಿಫಿಕೇಶನೊಂದನ್ನು ಪ್ರಕಟಿಸಿ ಯಾವುದೇ ಕೋರ್ಟಿಗೆ ಪ್ರತಿ ಮಾನ ನಿರ್ಧಾರದ ಕಾರ್ಯವೊಪ್ಪಿಸಿದರೆ, ಅದೂ ಈ ಕಲಮಿಗೋಸ್ಕರವಾದ ಕೋರ್ಟು ಎನಿಸುತ್ತದೆ.

ಮೇಲಿನ ವಿವರಣೆಯಿಂದ ಈ ಕಲಮಿನ ವಿಚಾರಣೆಗೋಸ್ಕರ ಪ್ರತಿವಾದಿಯು ವಾಸಸ್ಥಳ ವಿರುವ ಕ್ಷೇತ್ರದ ಕೋರ್ಟು ಈ ಕಲಮಿನ ಕೋರ್ಟೆನಿಸಲಾರದು. ಸಂಬಂಧಿಸಿದ ಸ್ಥಾವರ ಆಸ್ತಿ ಇಲ್ಲವೆ ವ್ಯವಹಾರ ಇರುವ ಕ್ಷೇತ್ರದ ಕೋರ್ಟು ಮಾತ್ರ ಅಂಥ ಕೋರ್ಟು ಎನಿಸುತ್ತದೆ.

## ಕ. ೨೩

ವಾಸದ ಮನೆಗಳನ್ನು ಕುರಿತು ವಿಶೇಷ ಏರ್ಪಾಡುಗಳು

ಹಿಂದೂ ಅಮೃತ್ಯುಲೇಖೀಯನೊಬ್ಬ ಅಥವಾ ಒಬ್ಬಳು, ತನ್ನ ಹಿಂದೆ ಪರಿಶಿಷ್ಟದ ೧ನೆಯ ವರ್ಗದ ಪುರುಷ ಮತ್ತು ಸ್ತ್ರೀವಾರಸದಾರರನ್ನು ಬಿಟ್ಟಿದ್ದು, ಆತನ ಅಥವಾ ಆಕೆಯ ಆಸ್ತಿಯಪೈಕಿ, ಆತನ ಅಥವಾ ಅವಳ ಕುಟುಂಬಸ್ಥರಿಂದ ಪೂರ್ತಿಯಾಗಿ ವಾಸಿಸಲ್ಪಟ್ಟ ವಾಸದ ಮನೆಯೊಂದಿದ್ದರೆ, ಅಂಥ ಸಂದರ್ಭದಲ್ಲಿ ಈ ಕಾಯ್ದೆಯಲ್ಲೇನೆ ಅಡಕವಾಗಿದ್ದರೂ, ಇಂಥ ಮನೆಯನ್ನು ಪುರುಷವಾರಸದಾರರು ತಮ್ಮ ತಮ್ಮಲ್ಲಿ ಹಂಚಿಕೊಳ್ಳಲು ನಿರ್ಧರಿಸುವವರೆಗೆ, ಸ್ತ್ರೀ ವಾರಸದಾರಳಿಗೆ ಮನೆಯ ವಿಭಜನೆಯನ್ನು ಕೇಳುವ ಹಕ್ಕು ಉದ್ಭೂತವಾಗತಕ್ಕದ್ದಲ್ಲ; ಆದರೆ, ಸ್ತ್ರೀ ವಾರಸದಾರಳಿಗೆ ಅಂಥ ಮನೆಯಲ್ಲಿ ವಾಸಿಸುವ ಹಕ್ಕು ಇರತಕ್ಕದ್ದು;

ಪರಿಮಿತಿಯೇನಂದರೆ, ಇಂಥ ಸ್ತ್ರೀ ವಾರಸದಾರಳು 'ಮಗಳು' ಆಗಿರುವ ಪಕ್ಷದಲ್ಲಿ, ಅವಳು, ಅವಿವಾಹಿತೆಯಾಗಲಿ, ಗಂಡನಿಂದ ಪರಿ

ತ್ಯಕ್ತಳು ಅಥವಾ ಪ್ರತ್ಯೇಕಿತಳಾಗಲಿ, ಅಥವಾ ವಿಧವೆಯಾಗಲಿ, ಆಗಿದ್ದರೆ ಮಾತ್ರ ಅವಳಿಗೆ ವಾಸದ ಮನೆಯಲ್ಲಿ ವಾಸಿಸುವ ಹಕ್ಕು ಇರತಕ್ಕದ್ದು.

## ಟೀಕೆ

### ೧೧೬ ವ್ಯಾಪ್ತಿ ಮತ್ತು ಉದ್ದೇಶ

ಈ ಕಲಮಿನನ್ವಯ ಪುರುಷ ವಾರಸದಾರರು ವಾಸದ ಮನೆಯನ್ನು ಪಾಲು ಮಾಡಿಕೊಳ್ಳಲು ನಿರ್ಧರಿಸುವವರೆಗೆ ಸ್ತ್ರೀ ವಾರಸದಾರರಿಗೆ ಅಂಥ ಮನೆಯ ವಿಭಜನೆಯನ್ನು ಕೇಳಲು ಹಕ್ಕು ಉಂಟಾಗಲಾರದು. ಹಾಗೆಂದ ಮಾತ್ರಕ್ಕೆ ಅಮೃತ್ಯು ಲೇಖೀಯ ಆಸ್ತಿಯಾದ ವಾಸದ ಮನೆಯಲ್ಲಿ ಸ್ತ್ರೀ ವಾರಸದಾರಳಿಗೆ ಹಕ್ಕೇ ಉಂಟಾಗಲಿಲ್ಲವೆಂದಲ್ಲ; ವಾರಸಾ ಮುಟ್ಟಿದ ಕ್ಷಣವೇ ಅಂಥ ಮನೆಯಲ್ಲಿನ ಅವಳ ಬಾಧ್ಯತೆ ಅವಳಲ್ಲಿ ಸಂಪ್ರಾಪ್ತ(Vested) ವಾಗುತ್ತದೆ. ಆದರೆ, ಪುರುಷ ವಾರಸದಾರರು ಪಾಲುಮಾಡಿಕೊಳ್ಳಲು ಸಮ್ಮತಿಸುವವರೆಗೆ, ಅವಳಿಗೆ ಪಾಲು ಬೇಡಲು ಮಾತ್ರ ಬರುವದಿಲ್ಲ. ಈ ಚಿಕ್ಕ ಪರಿಮಿತಿಯು ಹಕ್ಕಿನ ಪರಿಸೀಮನವೆನ್ನುವುದಕ್ಕಿಂತ ಅದನ್ನು ಮುಂದೂಡುವಿಕೆಯಾಗಿದೆ.

ಸ್ತ್ರೀ ವಾರಸದಾರಳು ಮಗಳಾಗಿದ್ದ ಪಕ್ಷದಲ್ಲಿ ಈ ವಾಸದ ಮನೆಯ ವಿಭಜನೆಯ ಹಕ್ಕು ಇನ್ನೂ ಸೀಮಿತವಾಗಿದೆ. ಸ್ತ್ರೀ ವಾರಸದಾರಳಾದ ಮಗಳು, ಅವಿವಾಹಿತೆ, ಪರಿತ್ಯಕ್ತೆ, ಪ್ರತ್ಯೇಕಿತೆ ಅಥವಾ ವಿಧವೆಯಾಗಿದ್ದರೆ ಮಾತ್ರ, ಅವಳಿಗೆ ವಾಸದ ಮನೆಯಲ್ಲಿ ವಾಸಮಾಡುವ ಹಕ್ಕುಮಾತ್ರ ದೊರೆಯುತ್ತದೆ. ಉಳಿದ ೧ನೆಯ ವರ್ಗದ ಸ್ತ್ರೀ ವಾರಸದಾರರಿಗೆ, ಪಾಲುಬೇಡುವ ಹಕ್ಕು ಮುಂದೂಡಲ್ಪಟ್ಟಿದ್ದರೂ, ವಾಸಮಾಡುವ ಹಕ್ಕು ಅಬಾಧಿತವಾಗಿ ಉಳಿದಿದೆ. ಮಗಳಿಗಾದರೆ, ಮನೆಯಲ್ಲಿ ವಾಸಿಸುವ ಹಕ್ಕುಕೂಡ ಕೆಲವೇ ವಿಶಿಷ್ಟ ಸನ್ನಿವೇಶಗಳಲ್ಲಿ ಉಪಲಬ್ಧವಾಗುತ್ತದೆ.

### ೧೧೭ ಕಲಮು ಯಾವಾಗ ಅನ್ವಯಿಸುತ್ತದೆ

ಕೆಳಗಿನ ಶರ್ತುಗಳು ಅಸ್ತಿತ್ವದಲ್ಲಿರುವಾಗ ಮಾತ್ರ ಈ ಕಲಮು ಅನ್ವಯಿಸುತ್ತದೆ:

• (೧) ಅಮೃತ್ಯುಲೇಖೀಯ ವಕ್ತಿಯ ವಾರಸದಾರರು ಪರಿಶಿಷ್ಟದ ೧ ನೆಯ ವರ್ಗದಲ್ಲಿ ನಿರ್ದಿಷ್ಟರಾದ ಸ್ತ್ರೀ ಮತ್ತು ಪುರುಷ ವಾರಸದಾರರಾಗಿರಬೇಕು. ಕೇವಲ ಸ್ತ್ರೀ ಅಥವಾ ಕೇವಲ ಪುರುಷವಾರಸದಾರರಿರುವಾಗ ಈ ಕಲಮು ಅನ್ವಯಿಸುವ ಸಂದರ್ಭವೇಳಲಾರದು.

(೨) ಅಮೃತ್ಯುಲೇಖೀಯ ಆಸ್ತಿಯ ಪೈಕಿ ವಾಸದ ಮನೆ ಅಥವಾ ಮನೆಗಳಿರತಕ್ಕದ್ದು. ಉಳಿದ ಆಸ್ತಿಯ ವಿಭಜನೆಯ ಬಗ್ಗೆ ಯಾವುದೇ ನಿರ್ಬಂಧವಿಲ್ಲ.

(೩) ವಾಸದ ಮನೆಯನ್ನು ಪೂರ್ತಿಯಾಗಿ ಅಮೃತ್ಯುಖೀಲೇಯ ವ್ಯಕ್ತಿಯ ಕುಟುಂಬಸ್ಥ (Members of the family) ರೇ ಉಪಯೋಗಿಸುತ್ತಿರಬೇಕು. ಬಾಡಿಗೆದಾರರ ವಶದಲ್ಲಿದ್ದ ಮನೆಗಳಿಗೆ ಈ ಕಲಮು ಅನ್ವಯಿಸಲಾರದು.

(೪) ವಾಸದಮನೆಯನ್ನು ಪಾಲು ಮಾಡಿಕೊಳ್ಳುವ ಬಗ್ಗೆ ಪುರುಷ ವಾರಸದಾರರಲ್ಲಿ ನಿರ್ಧಾರವಾಗತಕ್ಕದ್ದು. ಅರ್ಥಾತ್ ಒಬ್ಬನೇ ಪುರುಷ ವಾರಸದಾರನಿರುವಾಗ ಈ ಕಲಮು ಅನ್ವಯಿಸುವ ಪ್ರಶ್ನೆ ಯೇಳಲಾರದು. ಕಾರಣ ಸ್ತ್ರೀ ವಾರಸದಾರಳು ಅವನೊಡನೆ ಕೂಡಲೆ ವಾಸದ ಮನೆಯ ವಿಭಜನೆಯನ್ನು ಬೇಡಲು ಹಕ್ಕು ಪಡೆಯುತ್ತಾಳೆ.

## ಕ ೨೪

| | |
|---|---|
| ಪುನರ್ವಿವಾಹಿತರಾಗುವ ಕೆಲ ವಿಧವೆಯರು ವಿಧವೆಯರೆಂದು ವಾರಸಾ ಪಡೆಯಲಾರರು | ಅಮೃತ್ಯುಲೇಖೀಯ ವ್ಯಕ್ತಿಗೆ, ಪೂರ್ವಮೃತ ಪುತ್ರನ ವಿಧವೆಯೆಂದಾಗಲೀ, ಅಥವಾ ಸೋದರನ ವಿಧವೆಯೆಂದಾಗಲೀ, ಸಂಬಂಧಿತಳಾದ ಯಾವಳೇ ವಾರಸದಾರಳು, ವಾರಸಾ ತೆರೆದ ತಾರೀಖಿಗೆ ಅವಳು ಪುನರ್ವಿವಾಹಿತಳಾಗಿದ್ದ |

ಲ್ಲಿ, ಅಂಥ ವಿಧವೆಯೆಂದು ಅಮೃತ್ಯುಲೇಖೀಯ ವ್ಯಕ್ತಿಯ ಆಸ್ತಿಗೆ ವಾರಸಾ ಹಕ್ಕು ಪಡೆಯತಕ್ಕದ್ದಲ್ಲ.

### ಟೀಕೆ

### ೧೧೮ ಉದ್ದೇಶ

ಪತ್ನಿಯು ಪತಿಯ ಅರ್ಧಾಂಗಿ ಯಾದ್ದರಿಂದ, ಅವಳು ಇನ್ನೊಬ್ಬ ವ್ಯಕ್ತಿಯನ್ನು ವರಿಸಿದ ಕ್ಷಣವೇ, ಅವಳ ಮುಂಚಿನ ಸ್ಥಾನಮಾನ ಇಲ್ಲದಂತಾಗುವುದೆಂಬುದೇ ಈ ಕಲಮಿನ ಮೂಲ ತತ್ವ. ಹಿಂದಿನ ಹಿಂದೂ ಕಾನೂನಿನಲ್ಲಿ ಕೂಡ, ಗೋತ್ರಜಸ

ಪಿಂಡಸ ವಿಧವೆ ಪುನರ್ವಿವಾಹಿತಳಾದರೆ, ಆತನ ವಾರಸದಾರಳಾಗುವ ಹಕ್ಕೇನಿಲ್ಲ.

ಈ ಕಾಯ್ದೆಯಲ್ಲಿ ವಾರಸದಾರರಾಗಿರುವ ವಿಧವೆಯರೆಂದರೆ, ಅಮೃತ್ಯುಲೇಖೀಯನ ವಿಧವೆ, ಆತನ ಮಗನ ವಿಧವೆ, ಆತನ ಮೊಮ್ಮಗನ ವಿಧವೆ, ಆತನ ತಂದೆಯ ವಿಧವೆ ( ಎಂದರೆ ಆತನ ಮಲತಾಯಿ ) ಮತ್ತು ಆತನ ಸೋದರನ ವಿಧವೆ. ಗಂಡು ವಳಿಗರ ಅಥವಾ ಹೆಣ್ಣುವಳಿಗರ ವಿಧವೆಯರು ವಾರಸದಾರರೆನಿಸುವದಿಲ್ಲ.

ಪ್ರಸ್ತುತ ಕಲಮಿನ ನಿಷೇಧವು ಅಮೃತ್ಯುಲೇಖೀಯ ವಿಧವೆ ಮತ್ತು ಆತನ ತಂದೆಯ ವಿಧವೆಯರಿಗೆ ಅನ್ವಯಿಸುವುದೆಂದು ಸುವ್ಯಕ್ತವಾಗಿ ಹೇಳಿಲ್ಲ. ಅಮೃತ್ಯುಲೇಖೀಯನ ವಿಧವೆ ಪುನರ್ವಿವಾಹಿತಳಾಗುವದಾದರೆ, ವಾರಸಾ ತೆರೆದ ಕ್ಷಣದ ನಂತರವೇ ಆಗಲು ಸಾಕು. ಕಾರಣ, ಅವಳು ವಾರಸಾ ಪಡದೇ ಪಡೆಯುತ್ತಾಳೆ.

ಆದರೆ, ತಂದೆಯ ವಿಧವೆ, ಅಥವಾ ಮಲತಾಯಿಯು ಮಾತ್ರ, ತನ್ನ ಮಲಮಗ ಇರುವಾಗಲೇ ಪುನರ್ವಿವಾಹಿತೆ ಯಾದರೂ, ಆತನಿಗೆ ವಾರಸದಾರಳಾಗುವ ಹಕ್ಕು ಕಳೆದುಕೊಳ್ಳಲಾರಳು.

## ಕ. ೨೫

**ಖೂನಿ ಅಪರಾಧಿಯ ಅನರ್ಹತೆ**

ಖೂನಿ ಅಪರಾಧ ಮಾಡಿದ ಇಲ್ಲವೆ ಖೂನಿ ಅಪರಾಧವನ್ನು ಪುರಸ್ಕರಿಸಿದ (Abet) ವ್ಯಕ್ತಿಯು ಖೂನಿಯಾದ ವ್ಯಕ್ತಿಯ ಆಸ್ತಿಯನ್ನಾಗಲಿ,ಅಥವಾ ಯಾವ ಆಸ್ತಿಯ ವಾರಸಾ ಪ್ರಾಪ್ತಿಗೋಸ್ಕರ ಖೂನೀ ಅಪರಾಧ ಅಥವಾ ಅಥವಾ ಆದರ ಪುರಸ್ಕಾರ ನಡೆಯಿತೋ ಅಂಥ ಆಸ್ತಿಯನ್ನಾಗಲೀ, ವಾರಸಾ ರೀತ್ಯಾ ಪಡೆಯಲು ಅನರ್ಹನೆ ನಿಸತಕ್ಕದ್ದು.

### ಟೀಕೆ

### ೧೧೦ ವ್ಯಾಪ್ತಿ ಮತ್ತು ಉದ್ದೇಶ

ವಾರಸಾ ಪಡೆಯಲೋಸುಗ ಅಥವಾ ವಾರಸಾ ಪ್ರಾಪ್ತಿಯನ್ನು ಹೆಚ್ಚಿಸುಗ

ಮವಾಗಿಸುವುದಕ್ಕೋಸ್ಕರ ಅನ್ಮೃತ್ಯುಲೇಖೀಯ ವ್ಯಕ್ತಿಯನ್ನು ವಧೆ ಮಾಡಿದ ವಾರ ಸಾದಾರ ಅಪರಾಧಿಗಳಿಗೆ, ಅನ್ಮೃತ್ಯುಲೇಖಿಯ ಆಸ್ತಿಯಲ್ಲಿ ದಾಯ ಪ್ರಾಪ್ತವಾಗ ಕೂಡದೆಂಬುದು ಈ ಕಲಮಿನ ಮೂಲ ತತ್ವವಾಗಿದೆ. ಹಿಂದೂ ಕಾನೂನಿನಲ್ಲಿ ಇಂಥ ಯಾವುದೇ ತತ್ವ ಉಪಲಬ್ಧವಿಲ್ಲದಿದ್ದರೂ, ನ್ಯಾಯ, ಸೂಕ್ತತೆ, ಹಾಗೂ ಸದಸದ್ವಿವೇಕ ಗಳ ತಳಹದಿಯಮೇಲೆ ಖೂನಿ ಅಪರಾಧಿಯನ್ನು ಖೂನಿಯಾದ ವ್ಯಕ್ತಿಯ ಆಸ್ತಿಗೆ ವಾರಸಾ ಪಡೆಯಲು ಅನರ್ಹನೆಂದು ತೀರ್ಮಾನಿಸಲಾಗಿದೆ ( ಕೆಂಚವ್ವಾ ವಿ| ಗಿರಿ ಮಲ್ಲಪ್ಪಾ 23 Bom R L 779 783 ) ಕೆಂಚವ್ವಾ ವಿ| ಗಿರಿಮಲ್ಲಪ್ಪಾ ಪ್ರಕರ ಣದಲ್ಲೇ ಪ್ರಿವೀ ಕೌನ್ಸಿಲ್ ನವರು, ಖೂನಿ ಮಾಡಿದ ವ್ಯಕ್ತಿ ವಾರಸಾ ತೆರೆದಾಗ ಆಸ್ತಿತ್ವದಲ್ಲಿಲ್ಲವೆಂದೇ ಪರಿಗಣಿಸತಕ್ಕದ್ದೆಂದೂ, ಆತನು ಹೊಸ ವಂಶಾನುಕ್ರಮವೊಂದರ ಮೂಲ ಪುರುಷವೆನಿಸಲು ಅನರ್ಹನೆಂದೂ ವಿಧಿಸಿದ್ದಾರೆ.

ಪ್ರಸ್ತುತ ಕಲಮು ಕೆಂಚವ್ವಾ ವಿ| ಗಿರಿಮಲ್ಲಪ್ಪ ಪ್ರಕರಣದಲ್ಲಿ ತೀರ್ಮಾನವಾದ ತತ್ವವನ್ನೇ ಶಾಸನೀಕರಿಸುತ್ತದೆ. ಫಲವಾಗಿ ಖೂನಿಯಾದ ವ್ಯಕ್ತಿಯ ಆಸ್ತಿಯು, ಖೂನಿ ಮಾಡಿದವನು, ಅನ್ಮೃತ್ಯುಲೇಖೀಯನಿಗಿಂತ ಪೂರ್ವದಲ್ಲೇ ಮೃತನಾದನೆಂ ಬಂತೆ ಮಿಕ್ಕ ವಾರಸದಾರರಿಗೆ ಅನುಪ್ರಾಪ್ತವಾಗುತ್ತದೆ.

## ೧೧೧ ಖೂನಿ ಅಥವಾ ನರವಧೆ

ಖೂನಿಯೆಂದರೇನೆಂಬುದನ್ನು ಈ ಕಲಮು ವ್ಯಾಖ್ಯಾಯಿಸುವದಿಲ್ಲ. ಖೂನಿಯ ಸ್ವರೂಪವನ್ನರಿಯಲು ಇಂಡಿಯನ್ ಪಿನಲ್‌ಕೋಡ್ ಕಲಮು ೩೦೦ ನ್ನು ಓದತಕ್ಕದ್ದು. ಖೂನಿಯ ಪುರಸ್ಕಾರ ( Abetment ) ಎಂದರೇನೆಂಬುದು ಅದೇ ಕೋಡಿನ ೧೦೭ ನೆಯ ಕಲಮಿನಲ್ಲಿ ವಿವರಿಸಲಾಗಿದೆ.

ವಾರಸದಾರನು ಖೂನಿಯ ಅಪರಾಧ ( ಇ. ಪಿ. ಕೋ. ಕ. ೩೦೨ ) ಮಾಡಿ ರದೆ ಕೇವಲ ಅಪರಾಧಾತ್ಮಕ ನರವಧೆ (ಇ. ಪಿ. ಕೋ. ಕ. ೩೦೪ ) ಮಾಡಿದ್ದರೂ ಸಹ, ನ್ಯಾಯ, ಸೂಕ್ತತೆ, ಹಾಗೂ ಸದ್ವಿವೇಕಗಳ ದೃಷ್ಟಿಯಿಂದಲೂ ಮತ್ತು ಸಾರ್ವ ಜನಿಕ ಹಿತದ ದೃಷ್ಟಿಯಿಂದಲೂ, ಅಂಥ ವಾರಸದಾರನನ್ನು ವಾರಸಾದಿಂದ ವ್ಯಾವರ್ತಿಸ ಲಾಗಿದೆ. ( ಕೆಂಚವ್ವಾ ವಿ| ಗಿರಮಲ್ಲಪ್ಪಾ ) ಕಾರಣವೇನಂದರೆ - ವಾರಸಾ ಹಾಗೂ ವಂಶಾನುಕ್ರಮಗಳನ್ನಾಗಲಿ, ಮೃತ್ಯು ಲೇಖಗಳ ಅನುಷ್ಠಾನವನ್ನಾಗಲಿ ನಿಯಂತ್ರಿ ಸುವ ಶಾಸನಗಳು, ಸಾರ್ವಜನಿಕ ಧೋರಣೆಯ ಪರಮೋಚ್ಚ ಧ್ಯೇಯಗಳಿಗಾಗಲಿ, ಪರಂಪರಾಗತ ನ್ಯಾಯಶಾಸ್ತ್ರ ತತ್ವಗಳಿಗಾಗಲಿ, ವ್ಯತಿರಿಕ್ತವಾದ ಉದ್ದೇಶಗಳಿಂದ

ಪ್ರೇರಿತವಾವೆಗಿಯೆಂದು ಪರಿಗಣಿಸಲಾಗದು. ( ಅದೇ ಕೆಂಚವ್ವಾ ವಿ| ಗಿರಿಮಲ್ಲವ್ವಾ ) ಆದರೆ, ಈಗ ಪ್ರಸ್ತುತ ಕಲಮು ಖೂನಿ ಅಪರಾಧಿ ( ಇ. ಪಿ. ಕೊಡ. ೧೦೨ ) ಯನ್ನು ಮಾತ್ರ ವಾರಸಾದಿಂದ, ವ್ಯಾವರ್ತಿಸುವುದರಿಂದ, ಆ ಅಪರಾಧಕ್ಕಿಂತ ಕಡಿಮೆಯ ಬೇರೆ ಅಪರಾಧವನ್ನೆಸಗಿದವನಿಗೆ, ಈ ಕಲಮಿನ ನಿರ್ಬಂಧ ಅನ್ವಯಿಸಲಾರದು.

## ೧೧೨ ಖೂನಿ ಅಪರಾಧಿಯ ವಾರಸದಾರರು

ಖೂನಿಯಾದ ವ್ಯಕ್ತಿಯ ಆಸ್ತಿಗೆ ಖೂನಿ ಅಪರಾಧಿಯ ಮುಖಾಂತರ ಹಕ್ಕು ಕೇಳುವ - ಅರ್ಥಾತ್ ಖೂನಿ ಅಪರಾಧಿಯ ವಾರಸದಾರರಾದ - ವ್ಯಕ್ತಿಗಳಿಗೆ ಸಹ ಈ ಕಲಮಿನ ಅನರ್ಹತೆ ಅನ್ವಯಿಸುತ್ತದೆ. ಯಾಕೆಂದರೆ, ಖೂನಿ ಅಪರಾಧಿಯು ಅಮೃತ್ಯುಲೇಖೀಯನಿಗಿಂತ ಮೊದಲೇ ಮೃತನಾದಂತೆ ಪರಿಗಣಿಸಲಾಗುವುದರಿಂದ, ಅಮೃತ್ಯುಲೇಖಿಯನ ಆಸ್ತಿ ಆತನಲ್ಲಿ ಸಂಪ್ರಾಪ್ತ ( Vest ) ವಾಗುವುದೇ ಇಲ್ಲ. ಫಲವಾಗಿ ಅದು ಆತನ ವಾರಸದಾರರಿಗೆ ಅನುಪ್ರಾಪ್ತ ( Devolve ) ವಾಗುವ ಪ್ರಶ್ನೆ ಯೇಳುವದಿಲ್ಲ. ( ಕೆಂಚವ್ವ ವಿ| ಗಿರಿಮಲ್ಲವ್ವಾ ಮತ್ತು ಜಿಂದಕೌರ ವಿ| ಇಂದರಸಿಂಗ್ Air 1922 Rlh 293 ನೋಡಿ )

ಆದರೆ, ಖೂನಿ ಅಪರಾಧಿಯಾದ ವ್ಯಕ್ತಿಗೆ ಸಂಬಂಧಿತರಾಗಿಯೂ, ಆತನ ಮುಖಾಂತರ ಅಮೃತ್ಯುಲೇಖೀಯನ ಆಸ್ತಿಗೆ ಹಕ್ಕು ಕೇಳದೇ ತಮ್ಮ ಸ್ವಂತ ಹಕ್ಕಿನಿಂದಲೇ ವಾರಸಾ ಪಡೆಯುವ ವಾರಸದಾರರಿಗೆ ಈ ಅನರ್ಹತೆ ಅನ್ವಯಿಸಲಾರದು

## ಕ. ೨೬

**ಧರ್ಮಾಂತರಿತರ ಅನುವಂಶಿಕರ ಅನರ್ಹತೆ**

ಹಿಂದುವೊಬ್ಬನು [ಳು] ಈ ಕಾಯ್ದೆ ಜಾರಿಗೆ ಬರುವ ಮುಂಚೆಯಾಗಲಿ, ಅಥವಾ ಬಂದನಂತರವಾಗಲಿ, ಧರ್ಮಾಂತರದಿಂದ ಹಿಂದುತ್ವವನ್ನು ಕಳೆದುಕೊಂಡಿದ್ದರೆ, ಅಥವಾ ಕಳೆದುಕೊಂಡರೆ, ಇಂಥ ಧರ್ಮಾಂತರದ ನಂತರ ಅವನಿಗೆ ಅಥವಾ ಅವಳಿಗೆ ಹುಟ್ಟಿದ ಮಕ್ಕಳು ಮತ್ತು ಅವರ ಅನುವಂಶಿಕರು (Descuncents) ಇಂಥ ಮಕ್ಕಳು ಅಥವಾ ಅನುವಂಶಿಕರು ವಾರಸಾ ತೆರೆಯುವಾಗ ಹಿಂದುಗಳಾಗಿದ್ದಲ್ಲದೆ ತಮ್ಮ ಹಿಂದೂ ಸಂಬಂಧಿಕರ ಆಸ್ತಿಯನ್ನು ದಾಯ ( inheritance ) ವಾಗಿ ಪಡೆಯಲು ಅನರ್ಹರೆನಿಸತಕ್ಕದ್ದು.

## ಟೀಕೆ

### ೧೧೩ ವ್ಯಾಪ್ತಿ ಮತ್ತು ಉದ್ದೇಶ

ವಿಧೇಯಕದ ೩೧ ನೆಯ ಕ್ಲಾಜಿನ ಕೊನೆಗಿರುವ ಟಿಪ್ಪಣಿಯಲ್ಲಿ ಈ ಏರ್ಪಾಡಿನ ವ್ಯಾಪ್ತಿ ಹಾಗೂ ಉದ್ದೇಶಗಳನ್ನು ಕೆಳಗಿನಂತೆ ವಿವರಿಸಲಾಗಿದೆ: —

" ಒಮ್ಮೆ ಆಸ್ತಿನಷ್ಟ ಹಾಗೂ ವಾರಸಾ ವ್ಯಾವರ್ತನಗಳಿಗೆ ಕಾರಣವಾಗುತ್ತಿದ್ದ ಧರ್ಮಾಂತರ ಹಾಗೂ ಜಾತಿ ಭ್ರಷ್ಟತೆಗಳು ಜಾತೀಯ ಅನರ್ಹತಾ ನಿವಾರಣಾ ಕಾಯ್ದೆ ೧೮೫೦ ರ ನಂತರ ಆ ಪರಿಣಾಮವನ್ನು ಪಡೆದಿರುವದಿಲ್ಲ. ಆದರೆ ಆ ಕಾಯ್ದೆಯಿಂದ ತನ್ನ ಧರ್ಮವನ್ನು ಬಿಟ್ಟ ಅಥವಾ ಧರ್ಮಬಹಿಷ್ಕೃತ ವ್ಯಕ್ತಿಗೆಮಾತ್ರ ರಕ್ಷಣೆ ದೊರೆಯುತ್ತದೆ. ಫಲವಾಗಿ, ಹಿಂದುವೊಬ್ಬ ಮುಸಲ್ಮಾನನಾಗಿ, ಆತನ ಆಸ್ತಿ ಮಹ್ಮದೀಯ ಕಾನೂನಿನನ್ವಯ ಆತನ ಅನುವಂಶಿಕರಿಗೆ ಹೋದ ಮೇಲೆ ಆತನ ಹಿಂದೂ ಸಹವಂಶಿಕರು (Collaterals) ಹಿಂದೂ ಕಾನೂನಿಗನುಸರಿಸಿ ವಾರಸಾಕೇಳಲು ಆ ಕಾಯ್ದೆಯಿಂದ ಅಸಾಧ್ಯವಾಗುತ್ತದೆ. ಕಾರಣ ಈ ಕ್ಲಾಜಿನಲ್ಲಿ ವಾರಸಾಬೇಡುವ ವಾರಸದಾರನು, ವಾರಸಾ ತೆರೆದಾಗ ಹಿಂದುವಾಗಿರತಕ್ಕದ್ದೆಂದು ವಿಧಿಸಲಾಗಿದೆ. ವಾರಸಾ ತೆರೆದ ನಂತರ ಪುನರ್ಧರ್ಮಾಂತರವೀಗ ಸಾಧ್ಯವಾಗುವದಿಲ್ಲ; ಮತ್ತು ಈ ನಿರ್ಬಂಧದಿಂದ, ಈ ಏರ್ಪಾಡಿನ ಯಾವುದೇ ದುಷ್ಪ್ರಯೋಜನ ಅಸಂಭವವಾಗುತ್ತದೆ. "

### ೧೧೪ 'ಧರ್ಮಾಂತರಿತನ ಅನುವಂಶಿಕರು ಮಾತ್ರ'

ಈ ಕಲಮಿನ ಅನರ್ಹತೆ ಧರ್ಮಾಂತರಿತನಿಗೆ ವೈಯಕ್ತಿಕವಾಗಿ ಅನ್ವಯಿಸದೆ ಆತನ ಹಿಂದುಗಳಲ್ಲದ ಅನುವಂಶಿಕರಿಗೆ ಮಾತ್ರ ಅನ್ವಯಿಸುತ್ತದೆ ಈ ಕಲಮಿನಿಂದ ಧರ್ಮಾಂತರಿತನಾದ ವ್ಯಕ್ತಿಯು ತನ್ನ ಹಿಂದೂ ಸಂಬಂಧಿಕರಿಂದ ದಾಯಾಂಶ ಪಡೆಯಲು ನಿರ್ಬಂಧವಿಲ್ಲ. ಆದರೆ ಆತನ ಮಕ್ಕಳು ಮತ್ತು ಅನುವಂಶಿಕರು ಮಾತ್ರ ವಾರಸಾ ತೆರೆದಾಗ ಹಿಂದುಗಳಾಗಿರದಿದ್ದ ಪಕ್ಷದಲ್ಲಿ, ಈ ಕಲಮಿನ ಅನರ್ಹತೆಗೊಳಗಾಗುತ್ತಾರೆ- ಫಲವಾಗಿ ಅವರಿಗೆ ಅವರ ಹಿಂದೂ ಸಂಬಂಧಿಕರ ಆಸ್ತಿಯಲ್ಲಿ ವಾರಸಾಧಿಕಾರ ಉದ್ಭೂತವಾಗಲಾರದು.

# ಕ. ೨೭

**ವಾರಸದಾರ ಅನರ್ಹತೆಗೊಳಗಾದಾಗ ವಾರಸಾಕ್ರಮ**

ಈ ಕಾಯ್ದೆಯನ್ವಯ ಯಾವುದೇ ಆಸ್ತಿಗೆ ಯಾವುದೇ ವ್ಯಕ್ತಿಯು ವಾರಸಾ ಪಡೆಯಲು ಅನರ್ಹನೆನಿಸಿದ ಸಂದರ್ಭದಲ್ಲಿ, ಅಂಥ ಆಸ್ತಿಯು, ಅನರ್ಹನೆನಿಸಿದ ವ್ಯಕ್ತಿಯು ಅಮೃತ್ಯುಲೇಖೀಯನಿಗಿಂತ ಮೊದಲೇ ಮೃತನಾ[ಳಾ]ದನೆಂಬಂತೆ ಅನುಪ್ರಾಪ್ತ (Devolution) ವಾಗತಕ್ಕದ್ದು.

## ಟೀಕೆ

### ೧೧೫ ವ್ಯಾಪ್ತಿ ಮತ್ತು ಉದ್ದೇಶ

ವಾರಸದಾರರ ಯಾದಿಯಲ್ಲಿರುವ ವ್ಯಕ್ತಿಯು ಈ ಕಾಯ್ದೆಯ, ೨೫, ೨೬, ಮತ್ತು ೨೮ ನೆಯ ಕಲಮುಗಳಲ್ಲಿ ಅಡಕವಾದ ಅನರ್ಹತೆಗೊಳಗಾಗಿದ್ದರೆ, ಆಸ್ತಿಯ ವಾರಸಾ ಯಾವ ರೀತಿಯಲ್ಲಿ ನಡೆಯತಕ್ಕದ್ದೆಂಬುದನ್ನು ಈ ಕಲಮಿನಲ್ಲಿ ಹೇಳಲಾಗಿದೆ. ಅಂಥ ವಾರಸದಾರ ಜೀವಂತನಾಗಿದ್ದರೂ ಆತ ಅಮೃತ್ಯುಲೇಖೀಯನಿಗಿಂತ ಮೊದಲೇ ಮೃತನಾಗಿದ್ದನೆಂಬಂತೆ ವಾರಸಾ ಹಕ್ಕಿನ ಅನುಪ್ರಾಪ್ತಿ ಯಾಗತಕ್ಕದ್ದೆಂದು ಈ ಕಲಮಿನ ಆದೇಶವಾಗಿದೆ.

ಅಮೃತ್ಯುಲೇಖೀಯ ಆಸ್ತಿಗೆ ಮಾತ್ರ ಈ ಕಲಮು ಅನ್ವಯಿಸುವುದರಿಂದ, ಮೃತ್ಯುಲೇಖೀಯ ಆಸ್ತಿಯ ಅನುಪ್ರಾಪ್ತಿಗೆ ಇಲ್ಲಿನ ನಿರ್ಬಂಧದ ಬಾಧೆ ಬರುವದಿಲ್ಲ.

### ೧೧೬ 'ಮೊದಲೇ ಮೃತನಾದನೆಂಬಂತೆ'

ಅನರ್ಹತೆಗೊಳಗಾದ ವ್ಯಕ್ತಿ ಅಮೃತ್ಯುಲೇಖೀಯನಿಗಿಂತ ಮುಂಚೆಯೇ ಮೃತನಾದನೆಂದು ಪರಿಗಣಿಸಲಾಗುವುದಾದ್ದರಿಂದ, ಆತನ ಮೂಲಕ ಯಾವ ವಾರಸದಾರರೂ ಅಮೃತ್ಯುಲೇಖೀಯನ ಆಸ್ತಿಗೆ ಹಕ್ಕುಕೇಳಲು ಸಾಧ್ಯವಿಲ್ಲ. ಯಾಕಂದರೆ, ಇಂಥ ಸಂದರ್ಭದಲ್ಲಿ, ಅಮೃತ್ಯುಲೇಖೀಯನ ಆಸ್ತಿಯು ಅನರ್ಹ ವಾರಸದಾರರಲ್ಲಿ ಸಂಪ್ರಾಪ್ತ (Vest) ವಾಗಲೇ ಇಲ್ಲ; ಕಾರಣ, ಅದು ಆತನ ವಾರಸದಾರರಿಗೆ ಅನುಪ್ರಾಪ್ತವಾಗುವ ಪ್ರಶ್ನೆಯೇ ಏಳಲಾರದು. ಕಾರಣ ಅನರ್ಹ ವ್ಯಕ್ತಿಯು,

ಹೊಸ ವಂಶಾನುಕ್ರಮಕ್ಕೆ (Linel descent) ಮೂಲ ಪುರುಷನೆನಿಸಲಾರನು. ಅನರ್ಹನ ವಾರಸದಾರನೆಂದು ಹಕ್ಕುಕೇಳುವ ಯಾವದೇ ವ್ಯಕ್ತಿಗೆ ದಾಯಾಂಶದಲ್ಲಿ ಯಾವುದೇ ಅಧಿಕಾರ ವುಂಟಾಗಲಾರದು. ಮೂಲಪುರುಷನಿಗೆ ಪ್ರಾಪ್ತವಾಗದ ಹಕ್ಕು ಆತನ ಅನುವಂಶಿಕರಿಗೆ ಪ್ರಾಪ್ತವಾಗದಿರುವುದು ತರ್ಕಬದ್ಧವಾಗಿದೆ.

# ಕ. ೨೮

**ರೋಗ, ಅಂಗವಿಕಲತೆ ಮೊದಲಾದವುಗಳು ಅನರ್ಹತೆಗಳೆನಿಸಲಾರವು**

ಯಾವುದೇ ರೋಗ, ಊನತೆ, ಅಂಗವಿಕಲತೆ (Deformity) ಯ ಕಾರಣದಿಂದಾಗಲಿ, ಇಲ್ಲವೆ ಈ ಕಾಯ್ದೆಯಲ್ಲೀ ಅನ್ಯಥಾ ವಿಧಿಸಿದಲ್ಲದೆ ಬೇರಿನ್ನಾವ ಕಾರಣದಿಂದಾಗಲೀ, ಯಾರಾಗಲಿ, ಯಾವುದೇ ಅಸ್ತಿಗೆ ವಾರಸಾ ಪಡೆಯಲು ಅನರ್ಹರೆನಿಸತಕ್ಕದ್ದಲ್ಲ.

## ಟೀಕೆ

### ೧೧೭ ವ್ಯಾಪ್ತಿ ಮತ್ತು ಉದ್ದೇಶ

ಹಿಂದೂ ಕಾನೂನಿನಲ್ಲಿ ಕುರುಡತನ, ಕಿವುಡತನ, ಮೂಕತನ, ಅಂಗವಿಹೀನತೆ, ಉನ್ಮಾದ ಅಥವಾ ಮಹಾರೋಗದಂತಹ ನಿವಾರಣೆಯಾಗದ ರೋಗಗಳು ವಾರಸಾ ವ್ಯಾವರ್ತನಕ್ಕೆ ಆಧಾರಗಳಾಗಿದ್ದವು. ಆದರೆ ೧೯೨೮ ರ ಅನರ್ಹತಾ ನಿವಾರಣ ಕಾಯ್ದೆ ( Hindu Succession Rmoval of disabilities) Act 1948 ಯಿಂದ ಆ ಜನ್ಮ ಉನ್ಮಾದ ಅಥವಾ ನಿರ್ಬುದ್ಧತೆಗಳ ವಿನಾ ಉಳಿದೆಲ್ಲ ದೌರ್ಬಲ್ಯ ಅಥವಾ ವಿಕಲತೆಗಳು ವಾರಸಾ ವ್ಯಾವರ್ತಕವೆನಿಸಕೂಡದೆಂದು ವಿಧಿಸಲಾಯಿತು. ಈ ಕಲಮಾದರೂ ಯಾವ ವ್ಯಕ್ತಿಯಾಗಲಿ ರೋಗ, ಲೋಪದೋಷ, ಅಥವಾ ಲಿಂಗವೈಕಲ್ಯದಿಂದಾಗಿ ವಾರಸಾ ಹಕ್ಕು ಕಳೆದುಕೊಳ್ಳಲಾಗದೆಂದು ವಿಧಿಸುತ್ತದೆ.

ಪ್ರಸ್ತುತ ಏರ್ಪಾಡು ಹಿಂದೂ ಕಾನೂನಿನ ಎಲ್ಲ ಸಂಪ್ರದಾಯಸ್ಥರಿಗೂ ಅನ್ವಯಿಸುವುದಾದ್ದರಿಂದ, ಯಾವುದೇ ಸಂಪ್ರದಾಯದಲ್ಲಿ ಈ ವರೆಗೆ ಊರ್ಜಿತದಲ್ಲಿರುವ ಮೇಲ್ಕಾಣಿಸಿದ ದೌರ್ಬಲ್ಯಗಳು ಇನ್ನುಮೇಲೆ ಅನ್ವಯಿಸಲಾರವು. ಆ ಜನ್ಮ ಉನ್ಮಾದ

( Lunacy ) ಮತ್ತು ನಿರ್ಬುದ್ಧತೆ ( Idiocy ) ಗಳೂ ಇನ್ನುಮೇಲೆ ವಾರಸಾ ವ್ಯಾವರ್ತಕ ಆಧಾರಗಳೆನಿಸಲಾರವು.

## ೧೧೪ "ಬೇರಿನ್ನಾವುದೇ ಕಾರಣದಿಂದಾಗಲೀ"

ಈ ಕಲಮಿನಲ್ಲಿ ಕಂಡು ಬರುವ "ಬೇರಿನ್ನಾವುದೇ ಕಾರಣದಿಂದಾಗಲಿ" ಎಂಬ ಪದಪ್ರಯೋಗದಿಂದ ಈ ಕಲಮಿನ ಅನರ್ಹತಾ ನಿವಾರಣೆಯು ಪಾತಿವ್ರತ್ಯ ಭ್ರಷ್ಟತೆ ( Unchastity ) ಗೂ ಅನ್ವಯಿಸುವುದೆಂದು ಸ್ಪಷ್ಟವಾಗುತ್ತದೆ. ಕಾರಣ ಇನ್ನು ಮೇಲೆ ಸ್ತ್ರೀ ವಾರಸದಾರಳು ವ್ಯಭಿಚಾರಿಯೆಂದು ವಾರಸಾ ನಿರಾಕರಿಸಲು ಬಾರದು, ಈ ವರೆಗಿನ ಹಿಂದೂ ಕಾನೂನಿನಲ್ಲಿ ಸ್ತ್ರೀಧನ ವಾರಸಾಕ್ಕೆ ವ್ಯಭಿಚಾರವು ವಾರಸಾ ನಿವರ್ತಕ ಕಾರಣವೆನಿಸದಿದ್ದರೂ ವಿಧವಾ ಸ್ವಾಮಿತ್ವವನ್ನು ಸ್ವೀಕರಿಸುವದರಲ್ಲಿ ತಪ್ಪದೆ ಅನ್ವಯಿಸುತ್ತಿತ್ತು. ಆದರೆ ೧೯೩೭ ರ ಹಿಂದೂ ಸ್ತ್ರೀಯರ ಆಸ್ತಿ ಹಕ್ಕಿನ ಕಾಯ್ದೆ ಈ ಅನರ್ಹತೆಯನ್ನು ನಿವಾರಿಸಿತು. ಆದರೆ ಆ ಬಗ್ಗೆ ಕೋರ್ಟಿನ ನಿರ್ಣಯವಿದ್ದರೆ ಅದು ಮಹತ್ವದ್ದೆನಿಸಬೇಕೆಂದು ಪ್ರಸ್ತುತ ಕಾಯ್ದೆಯ ವಿಧೇಯಕದ ಕ್ಲಾಜ ೨೭ ರಲ್ಲಿ ನಿರ್ಬಂಧವೊಂದನ್ನು ಸೇರಿಸಲಾಗಿತ್ತು. ಸಾಂಪತ್ತಿಕ ಸಂಯುಕ್ತ ಸಮಿತಿಯು ಅದೆಲ್ಲ ಸಂಕೀರ್ಣತೆ ಅನಗತ್ಯವೆಂದು ಕಲಮನ್ನು ಪ್ರಸ್ತುತ ರೂಪದಲ್ಲಿ ಸಿದ್ಧಗೊಳಿಸಿತು.

## ಕ ೨೯

| | |
|---|---|
| ವಾರಸದಾರರ ಅಭಾವದಲ್ಲಿ | ಅಮೃತ್ಯುಲೇಖೀಯ ವ್ಯಕ್ತಿಯನಂತರ, ಅವನ ಅಥವಾ ಅವಳ ಆಸ್ತಿಗೆ ಈ ಕಾಯ್ದೆಯ ಏರ್ಪಾಡುಗಳಿಗನುಸಾರವಾಗಿ ವಾರಸಾ ಪಡೆಯಲು ಅರ್ಹತೆಯುಳ್ಳ ವಾರಸ |

ದಾರರಾರೂ ಇಲ್ಲದಿದ್ದ ಪಕ್ಷದಲ್ಲಿ, ಆಸ್ತಿಯು ಸರಕಾರಕ್ಕೆ ಅನುಪ್ರಾಪ್ತವಾಗತಕ್ಕದ್ದು; ಮತ್ತು ಸರಕಾರವು ವಾರಸುದಾರನ ಮೇಲೆ ಬಂಧನಕಾರಕವಾಗುತ್ತಿದ್ದ ಯಾವತ್ತೂ ಕರ್ತವ್ಯ ಹಾಗೂ ಜವಾಬ್ದಾರಿಗಳಿಗಂಕಿತವಾಗಿ ಅಂಥ ಆಸ್ತಿಯನ್ನು ಪಡೆಯತಕ್ಕದ್ದು.

## ಟೀಕೆ

## ೧೧೯ ಉದ್ದೇಶ

ಬಹುತರ ಎಲ್ಲ ಕಾನೂನು ಪದ್ಧತಿಗಳಲ್ಲಿಯೂ ಸರಕಾರಕ್ಕೆ ಅಂತಿಮ ವಾರಸಾ ಮುಟ್ಟುವಬಗ್ಗೆ ಏರ್ಪಾಡುಗಳಿವೆ. ಹಿಂದೂ ಕಾನೂನಿಗೂ ಈ ತತ್ವ ಅಪರಿಚಿತವಲ್ಲ. ಕವಲಿ ವೆಂಕಟ ವಿ|| ಕಲೆಕ್ಟರ ಆಫ್ ಮಸುಲೀಪಟಂ 8 Moors Indian Appeals 508 ಪ್ರಕರಣದಲ್ಲಿ ಮದ್ರಾಸ ಹೈಕೋರ್ಟು ಬ್ರಾಹ್ಮಣನ ಆಸ್ತಿ ಸಹ ಈ ತತ್ವಕ್ಕೆ ಅಪವಾದವೆನಿಸಲಾರದೆಂದು ವಿಧಿಸಿದೆ ಈ ತತ್ವವನ್ನೇ ಪ್ರಸ್ತುತ ಕಲಮು ಪುನ: ಸ್ಥಾಪಿಸುತ್ತದೆ. ಇದು ಆಂಗ್ಲ ಕಾನೂನು ಪದ್ಧತಿಯಲ್ಲಿ ಇಶ್ಚೀಟ್ ತತ್ವವೆಂದು ಪ್ರಸಿದ್ಧವಿದೆ.

ಇಶ್ಚೀಟ್ ತತ್ವಾನುಸಾರ ಸರಕಾರವು ಯಾವುದೇ ಆಸ್ತಿಗೆ ಹಕ್ಕು ಕೇಳಿದರೆ, ಅನ್ಮೃತ್ಯುಲೇಖೀಯ ವ್ಯಕ್ತಿಗೆ ಅರ್ಹರಾದ ವಾರಸದಾರರಾರೂ ಉಳಿದಿಲ್ಲವೆಂದು ಪ್ರಸ್ಥಾಪಿಸುವ ಭಾರ ಸರಕಾರದ್ದಾಗಿದೆ, ( ಗಣಪತಿ ವಿ. ಸೆಕ್ರೆಟರಿ ಆಫ್‌ಸ್ಟೇಟ 23 Bom L. R. 462-64 ). ಈ ಕಾಯ್ದೆಗನುಸಾರವಾಗಿ ಎಷ್ಟೋದೂರದ ಗಂಡು ವಳಿಗರು ಹಾಗೂ ಹೆಣ್ಣುವಳಿಗರು ವಾರಸಾಧಿಕಾರ ಪಡೆದಿರುವುದರಿಂದ, ಇಶ್ಚೀಟ ತತ್ವ ಅನ್ವಯಿಸುವ ಮೊದಲು ಅವರ ಪೈಕಿ ಒಬ್ಬರೂ ಜೀವಂತರಿಲ್ಲವೆಂದು ಪ್ರಸ್ಥಾಪಿಸಬೇಕಾಗುತ್ತದೆ.

## ೧೨೦ ಸರಕಾರದ ಹೊಣೆ

ಕೊನೆಯ ವಾರಸದಾರ ನಾತೆಯಿಂದ ಸರಕಾರಕ್ಕೆ ಆಸ್ತಿ ದೊರೆತರೆ, ವಾರಸದಾರರಿಗೆ ಆಂಥ ಆಸ್ತಿಗೆ ಸಂಬಂಧಿಸಿ ಯಾವ ಕರ್ತವ್ಯ (Obligation) ಹಾಗೂ ಜವಾಬ್ದಾರಿ (Liabilites) ಗಳಿರುತ್ತಿದ್ದವೋ, ಅವೆಲ್ಲ ಅಬಾಧಿತವಾಗಿರುತ್ತವೆ. ಕೊನೆಯ ವಾರಸದಾರನು ಆಸ್ತಿಗೆ ಸಂಬಂಧಿಸಿ ವಿಶ್ವಸ್ತಿಯ ಸ್ವರೂಪದ ಜವಾಬ್ದಾರಿಗಳನ್ನು ನಿರ್ಮಿಸಿದ್ದರೆ, ಅವನ್ನೆಲ್ಲ ಸರಕಾರ ಅನುಷ್ಠಾನಕ್ಕೆ ತರಲೇಬೇಕಾಗುತ್ತದೆ. ( ಮುಸಾಮುತ್ ಗೋಲಾಬಕುನ್ವಾರ ವಿ||ಕಲೆಕ್ಟರ್ ಬನಾರಸ 4 Moors Indian Appeals 246 ). ಅದೇ ರೀತಿಯಾಗಿ ಆಸ್ತಿಯ ಮೇಲಿರುವ ಸಾಲದ ಬೋಜಾ ಮೊದಲಾದವುಗಳೂ ಸರಕಾರದ ಮೇಲೆ ಬಂಧನಕಾರಕವಾಗಿವೆ.

# ಅಧ್ಯಾಯ ೩

## ಮೃತ್ಯುಲೇಖೀಯ ವಾರಸಾಕ್ರಮ

### ಕ. ೩೦

ಮೃತ್ಯುಲೇಖೀಯ ವಾರಸಾ

೧ ಭಾರತೀಯ ವಾರಸಾ ಕಾಯ್ದೆ ೧೯೨೫ (39 of 1925) ರ ಅಥವಾ ಹಿಂದುಗಳಿಗನ್ವಯಿಸುವ ಸದ್ಯಕ್ಕೆ ಜಾರಿಯಲ್ಲಿರುವ ಮತ್ತಿನ್ನಾವುದೇ ಕಾನೂನಿನ ನಿರ್ಬಂಧುಗಳನ್ವಯ ಮೃತ್ಯುಲೇಖೀಯವಾಗಿ ವಿಲೇವಾರಿಮಾಡಲು ಸಾಧ್ಯವಿರುವ ಯಾವುದೇ ಆಸ್ತಿಯನ್ನು,ಹಿಂದುವು ಮೃತ್ಯುಪತ್ರ ಅಥವಾ ಇತರ ಮೃತ್ಯುಲೇಖೀಯ ವಿಲೇವಾರಿ ಮುಖಾಂತರ ವಿಲೇವಾರಿ ಮಾಡಬಹುದು.

**ವಿವರಣೆ**—ಮಿತಾಕ್ಷರ ಸಮಾಯಕದಲ್ಲಿನ ಹಿಂದೂ ಪುರುಷನೊಬ್ಬನ ಬಾಧ್ಯತೆ (Intrest) ಯಾಗಲಿ, ತರ್ವಾಡ, ತವಾಝಿ, ಇಲ್ಲೋಮ್, ಕುಟುಂಬ ಅಥವಾ ಕವರುವಿನ ಆಸ್ತಿಯಲ್ಲಿ, ಅನುಕ್ರಮವಾಗಿ ತರ್ವಾಡ, ತವಾಝಿ, ಇಲ್ಲೋಮ್ ಕುಟುಂಬ ಅಥವಾ ಕವರುವಿನ ಸದಸ್ಯರಿಗಿರುವ ಬಾಧ್ಯತೆ (Intrest) ಯಾಗಲಿ–ಈ ಕಾಯ್ದೆಯಲ್ಲಿ ಇಲ್ಲವೆ ಸದ್ಯಕ್ಕೆ ಜಾರಿಯಲ್ಲಿರುವ ಇನ್ನುಳಿದ ಯಾವುದೇ ಕಾನೂನಿನಲ್ಲಾಗಲಿ, ಏನೇ ಆತಂಕಅಡಕವಾಗಿದ್ದಾಗ್ಯೂ—ಈ ಉಪಕಲಮಿನ ಅರ್ಥದಲ್ಲಿ ಅವನ ಅಥವಾ ಅವಳ ಅಂಥ ಬಾಧ್ಯತೆ (Intrest) ಯು ಮೃತ್ಯುಲೇಖೀಯ ವಿಲೇವಾರಿ ಮಾಡಲು ಸಾಧ್ಯವಿರುವ ಆಸ್ತಿಯೆಂದು ಪರಿಗಣಿಸಲ್ಪಡತಕ್ಕದ್ದು.

೨ ಸಂಶಯ ನಿವಾರಣೆಗಾಗಿ ಈ ಮೂಲಕ ಶ್ರುತಪಡಿಸಲಾಗುವದೇನಂದರೆ:—ಮೃತನು ಮಾಡಿದ ಮೃತ್ಯುಪತ್ರ ಇಲ್ಲವೆ ಇತರ ಮೃತ್ಯುಲೇಖದ ಕಾರಣದಿಂದ ವಾರಸದಾರರು ತಮಗೆ ಹಕ್ಕಿನಿಂದ ಬರುತ್ತಿದ್ದ ಆಸ್ತಿಯನ್ನು ಕಳೆದುಕೊಂಡ ಕಾರಣ ಮಾತ್ರದಿಂದಲೇ, ಪರಿಶಿಷ್ಟದಲ್ಲಿನ ಯಾವುದೇ ವಾರಸದಾರರಿಗೆ ಲಭ್ಯವಿರುವ ಜೀವಿತಾಂಶದ ಹಕ್ಕಿಗೆ ಈ ಉಪಕಲಮಿನಲ್ಲಡಕವಾದುದೇನೂ ಭಾಧಕವೆನಿಸಲಾಗದು,

## ಟೀಕೆ

### ೧೩೧ ವ್ಯಾಪ್ತಿ

ಈ ಕಲಮು ಮೃತ್ಯುಲೇಖಿಯ ವಾರಸಾಕ್ರಮವನ್ನು ಕುರಿತು ಹೊಸ ಕಾನೂನನ್ನು ವಿಧಿಸದೆ ಭಾರತೀಯ ವಾರಸಾ ಕಾಯ್ದೆ ( The Indian Succession Act 1925 ) ಯ ೫೭ ನೆಯ ಕಲಮು ಮತ್ತು ೩ ನೆಯ ಪರಿಶಿಷ್ಟಗಳ ಏರ್ಪಾಡುಗಳಿಗಂಕಿತವಾಗಿ ಸಾಮಾನ್ಯ ಹಿಂದೂ ಕಾನೂನಿನ ಮೃತ್ಯುಲೇಖೀಯ ವಾರಸಾ ಕ್ರಮಮವೇ ಇನ್ನು ಮುಂದೆಯೂ ಹಿಂದುಗಳಿಗೆ ಅನ್ವಯಿಸತಕ್ಕದ್ದೆಂದು ವಿಧಿಸುತ್ತದೆ. ಉಪಕಲಮು (೧) ರ ವಿವರಣೆಯ ಮೂಲಕ ಜಾರಿಗೆ ಬರುವ ಹೊಸ ಏರ್ಪಾಡಿನಿಂದ ಮಿತಾಕ್ಷರ ಸಮಾಯಕದಲ್ಲಿನ ಹಿಂದುವಿನ ಬಾಧ್ಯತೆ (Inierest) ಯೂ ಮೃತ್ಯುಲೇಖೀಯ ವಿಲೇವಾರಿಗೆ ಯೋಗ್ಯವಾದ ಆಸ್ತಿಯೆನಿಸುತ್ತದೆ. ಹಾಗೆಯೇ ತರ್ವಾಡ ತವಾಝಿ ಇಲ್ಲೋಮ್ ಕುಟುಂಬ ಅಥವಾ ಕವರುವಿನಲ್ಲಿನ ಬಾಧ್ಯತೆಯೂ ಮೃತ್ಯುಲೇಖೀಯ ವಿಲೇವಾರಿಗೆ ಯೋಗ್ಯವೆನಿಸುತ್ತದೆ

ಉಪಕಲಮು (೨) ರ ಮೂಲಕ ಪರಿಶಿಷ್ಟದ ವಾರಸದಾರರ ಪೋಷಣಾಂಶದ ಹಕ್ಕು ಮೃತ್ಯುಲೇಖೀಯ ವಿಲೇವಾರಿಯಿಂದ ಬಾಧಿತವಾಗಲಾರದೆಂದು ವಿಧಿಸಲಾಗಿದೆ

### ೧೩೨ ಹಿಂದೂಮೃತ್ಯುಪತ್ರ ಅಥವಾ ವುಯಿಲು

೧೯೨೭ ನೆಯ ಜಾನೇವಾರಿ ೧ ನೆಯ ದಿನಾಂಕದ ನಂತರ ಮಾಡಲಾದ ಯಾವತ್ತೂ ಹಿಂದೂ ವುಯಿಲುಗಳು ಭಾರತೀಯ ವಾರಸಾ ಕಾಯ್ದೆಯ ೬೩ ಕಲಮಿಗನುಸಾರವಾಗಿ ಮಾಡಲ್ಪಟ್ಟವಾಗಿರಬೇಕಾಗುತ್ತದೆ.ಎಂದರೆ ಪ್ರತಿಯೊಂದು ವುಯಿಲು (೧) ಲಿಖಿತವಾಗಿರತಕ್ಕದ್ದು (೨) ಮೃತ್ಯುಲೇಖಕರ್ತನ ಸಹಿ ಯಿರತಕ್ಕದ್ದು ಮತ್ತು (೩) ಕನಿಷ್ಟ ಇಬ್ಬರು ಸಾಕ್ಷಿದಾರರಿಂದ ರುಜುವಾತಾಗಿರತಕ್ಕದ್ದು. ಮೃತ್ಯು ಪತ್ರವು ಯಾವುದೇ ವಿಶಿಷ್ಟ ನಮೂನೆಯಲ್ಲಾಗಲಿ, ಅಥವಾ ಭಾಷೆಯಲ್ಲಾಗಲಿ ಇರಬೇಕೆಂಬ ವಿಧಿಯಿಲ್ಲ. ಇಂಥವೇ ಶಬ್ದಗಳನ್ನುಪಯೋಗಿಸತಕ್ಕದ್ದೆಂಬ ನಿರ್ಬಂಧವೂ ಇಲ್ಲ. ಆದರೆ ಮೃತ್ಯುಲೇಖದ ಭಾಷೆಯಿಂದ ಮೃತ್ಯುಪತ್ರದ ಇಷ್ಟ ತಿಳಿಯುವಂತಿರಬೇಕು.

ವುಯಿಲಿಗೆ ಸ್ಟಾಂಪು ಡ್ಯೂಟಿಯ ಅಗತ್ಯವಿಲ್ಲ [ಸ್ಟಾಂಪ್ ಕಾಯ್ದೆಗೆ ೧ ಅ ೩೩ ]. ನೊಂದಾವಣೆಯೂ ಕಡ್ಡಾಯವಾಗಿಲ್ಲ [ ರಜಿಸ್ಟ್ರೇಶನ್ ಕಾಯ್ದೆ ಕ. ೧೮ ಕ್ಲಾಜ [ ಈ ]. ನೊಂದಾವಣೆಯಾಗದಿದ್ದರೆ ಮೃತ್ಯುಲೇಖದ ಬೆಲೆ ಅಥವಾ ಸತ್ಯತೆ ಬಾಧಿತವಾಗಲಾರದೆಂದು ಭಾರತದ ಸುಪ್ರೀಮ್ ಕೋರ್ಟು ಈಶ್ವರದೇವ ವಿ| ಕಾಮ್ತಾದೇವಿ A|R 1964 S C 280 ಪ್ರಕರಣದಲ್ಲಿ ವಿಧಿಸಿದೆ.

ಈ ಕಾಯ್ದೆ ಪಾಸಾಗುವ ಪೂರ್ವದಲ್ಲಿ ಹಿಂದುಗಳು ಕೆಳಗಿನ ಪ್ರಕಾರದ ಆಸ್ತಿಗಳನ್ನು ಮೃತ್ಯುಲೇಖೀಯವಾಗಿ ವಿಲೇವಾರಿ ಮಾಡಲು ಸಾಧ್ಯವಿರಲಿಲ್ಲ.

ಹಿಂದೂ ಸ್ತ್ರೀಯರ ಆಸ್ತಿ ಹಕ್ಕಿನ ಕಾಯ್ದೆ ೧೯೩೭ [೧೯೩೭ ರ ೧೮ ನೆಯ ಕಾಯ್ದೆ] ಇವನ್ನು ಈ ಮೂಲಕ ರಿಪೀಲು ಮಾಡಲಾಗಿದೆ.

## ಟೀಕೆ

೧೯೩೯ ರ ದಾಯಪ್ರಾಪ್ತಿ (Inheritanee) ಕಾನೂನಿನ ತಿದ್ದುಪಡಿ ಕಾಯ್ದೆಯಿಂದ ಹಿಂದುಗಳ ವಾರಸಾ ಕ್ರಮದಲ್ಲಿ ಕೆಲವು ಬದಲಾವಣೆಗಳನ್ನು ಮಾಡಲಾಗಿತ್ತು. ಹಿಂದೂ ಸ್ತ್ರೀಯರ ಆಸ್ತಿ ಹಕ್ಕಿನ ಕಾಯ್ದೆಯಿಂದ ಆಸ್ತಿ ಪ್ರಾಪ್ತಿಯ ವಿಷಯದಲ್ಲಿ ಸ್ತ್ರೀಯರಿಗೆ ಕೆಲವು ಹೆಚ್ಚಿನ ಅಧಿಕಾರಗಳನ್ನು ಕೊಡಲಾಯಿತು. ಈ ಯೆರಡೂ ಕಾಯ್ದೆಗಳ ಏರ್ಪಾಡುಗಳು ಈಗ ಈ ಕಾನೂನಿನಲ್ಲಿ ಅಡಕವಾಗಿವೆ ಯಾದ್ದರಿಂದ, ಈ ಕಾಯ್ದೆಗಳ ಪ್ರತ್ಯೇಕ ಅಸ್ತಿತ್ವದ ಅಗತ್ಯವಿಲ್ಲದಾಗಿದೆ. ಕಾರಣ ಅವನ್ನು ಈ ಕಲಮಿನ ಮೂಲಕ ರದ್ದುಗೊಳಿಸಲಾಗಿದೆ.

## ೧೨೫ ರದ್ದತಿಯ ಪರಿಣಾಮ

ಜನರಲ್ ಕ್ಲಾಜಿಸ್ ಕಾಯ್ದೆ (೧೮೯೭) ಯ ಕಲಮು (೬) ರಲ್ಲಿ ರದ್ದತಿಯ ಪರಿಣಾಮವನ್ನು ವಿವರಿಸಿದ್ದು ಅದು ಕೆಳಗಿನಂತಿದೆ :

ಕಲಮು ೬:–ಈ ಕಾಯ್ದೆಯಾಗಲಿ, ಅಥವಾ ಈ ಕಾಯ್ದೆಯ ನಂತರ ಪಾಸಾದ ಇನ್ನಾವುದೇ ಕೇಂದ್ರದ ಕಾಯ್ದೆ ಅಥವಾ ನಿಯಮಾವಳಿ (Regulation)ಯಾಗಲಿ, ಈ ವರೆಗೆ ಮಾಡಲಾದ ಅಥವಾ ಈ ನಂತರ ಮಾಡಲಾಗುವ ಯಾವುದೇ ಶಾಸನವನು ರದ್ದುಪಡಿಸಿದ ಪಕ್ಷದಲ್ಲಿ ಬೇರೆ ಅರ್ಥ ತೋರ್ಪಟ್ಟಲ್ಲದೆ, ರದ್ದತಿಯಿಂದ:–

(ಅ) ರದ್ದತಿ ಜಾರಿಗೆ ಬಂದ ಸಮಯದಲ್ಲಿ ಊರ್ಜಿತದಲ್ಲಿಲ್ಲದ ಇಲ್ಲವೆ ಅಸ್ತಿತ್ವದಲ್ಲಿಲ್ಲದ ಯಾವುದೂ ಪುನರುಜ್ಜೀವಿತ (Revive) ವಾಗತಕ್ಕದ್ದಲ್ಲ; ಇಲ್ಲವೆ,

(ಬ) ರದ್ದತಿಯಾದ ಶಾಸನದ ರದ್ದತಿಪೂರ್ವದ ಅನುಷ್ಠಾನ (Previous operation) ವಾಗಲಿ, ಅಥವಾ ಅದರನ್ವಯ, ವಿಧಿಬದ್ಧವಾಗಿ ಮಾಡಲಾದುದುದು ಅಥವಾ ಸಹಿಸಲಾದುದಾಗಲಿ, ಬಾಧಿತವಾಗತಕ್ಕದ್ದಲ್ಲ.

(ಕ) ರದ್ದತಿಯಾದ ಶಾಸನದನ್ವಯ ಸಂಪಾದಿತವಾದ, ಸಂಪ್ರಾಪ್ತವಾದ, ಅಥವಾ ಪ್ರಾಲಬ್ಧ (Incurred) ವಾದ ಯಾವುದೇ ಅಧಿಕಾರ, ವಿಶೇಷಾನುಕೂಲ (Privilege), ಕರ್ತವ್ಯ (Obligation) ಅಥವಾ ಜವಾಬ್ದಾರಿ (Liaoility) ಗಳು ಬಾಧಿತವಾಗತಕ್ಕದ್ದಲ್ಲ.

(ಡ) ರದ್ದತಿಯಾದ ಶಾಸನಕ್ಕೆ ವಿರುದ್ಧವಾದ ಅಪರಾಧಿಗಳಿಗಾಗಿ ಪಡೆದ ಶಿಕ್ಷೆ ದಂಡ, ಅಥವಾ ಹಕ್ಕುನಷ್ಟಗಳು ಬಾಧಿತವಾಗತಕ್ಕದ್ದಲ್ಲ.

(ಈ) ಮೇಲ್ಕಾಣಿಸಿದ ಯಾವುದೇ ಹಕ್ಕು, ವಿಶೇಷಾನುಕೂಲ, ಕರ್ತವ್ಯ,

ಜವಾಬ್ದಾರಿ, ದಂಡ, ಶಿಕ್ಷೆ ಅಥವಾ ಹಕ್ಕುನಷ್ಟಕ್ಕೆ ಸಂಬಂಧಿಸಿದ ಯಾವುದೇ ವಿಚಾರಣೆ, ಕಾನೂನುಕ್ರಮ, ಅಥವಾ ಕಾನೂನು ಪರಿಹಾರಗಳಿಗೆ ಬಾಧೆ ಬರತಕ್ಕದ್ದಲ್ಲ; - ಮತ್ತು ಇಂಥ ಯಾವುದೇ ವಿಚಾರಣೆ, ಕಾನೂನುಕ್ರಮ ಅಥವಾ ಪರಿಹಾರವನ್ನು ಕೈಕೊಳ್ಳುವುದಾಗಲಿ, ಮುಂದುವರಿಸುವುದಾಗಲಿ, ಅಥವಾ ಬಜಾಯಿಸುವುದಾಗಲಿ, ಮತ್ತು ಮೇಲ್ಕಾಣಿಸಿದ ಯಾವುದೇ ಶಿಕ್ಷೆ, ದಂಡ, ಅಥವಾ ಹಕ್ಕುನಷ್ಟಗಳನ್ನು ವಿಧಿಸುವುದಾಗಲಿ, ರದ್ದತಿಯ ಕಾಯ್ದೆ (Repaling Act) ಅಥವಾ ನಿಯಮಾವಳಿ (Regulation) ಪಾಸಾಗದಿದ್ದ ಹಾಗೆಯೇ ನಡೆಯತಕ್ಕದ್ದು.

## ೧೨. ಚಾಲೂ ಕ್ರಮಗಳು

ರದ್ದತಿಯಾದ ಕಾಯ್ದೆಗಳನ್ವಯ ಕೈಕೊಳ್ಳಲಾಗಿದ್ದು ಚಾಲೂ ಇರುವ ಕ್ರಮಗಳು ಹಳೆಯ ಕಾಯ್ದೆಗನುಸಾರವಾದ ವಿಧಾನವನ್ನೇ ಅನುಸರಿಸಿ ನಡೆಯತಕ್ಕದ್ದೆಂದು ಮೇಲ್ಕಾಣಿಸಿದ ಜನರಲ್ ಕ್ಲಾಜಿಸ್ ಆ್ಯಕ್ಟಿನ ೬ ನೆಯ ಕಲಮು ವಿಧಿಸುತ್ತದೆ. ಈಗ ಹಿಂದೂ ದಾಯಪ್ರಾಪ್ತಿ ಕಾನೂನು ತಿದ್ದುಪಡಿ ಕಾಯ್ದೆ (೧೯೨೯) ಮತ್ತು ಹಿಂದೂ ಸ್ತ್ರೀಯರ ಆಸ್ತಿಯ ಹಕ್ಕಿನ ಕಾಯ್ದೆ (೧೯೩೭) ಗಳು ಈ ಕಾಯ್ದೆ ಜಾರಿಗೆ ಬಂದನಂತರ ರದ್ದು ಬಾತಲ ಎನಿಸುತ್ತಿದ್ದರೂ, ಆ ಕಾಯ್ದೆಗಳನ್ವಯ ಸಧ್ಯದಲ್ಲಿ ಚಾಲೂ ಇರುವ ಕಾನೂನುಕ್ರಮಗಳು ಮಾತ್ರ ಅಬಾಧಿತವಾಗಿದ್ದು ಅವು ಆ ಕಾಯ್ದೆಗಳಲ್ಲಿ ವಿಧಿಸಿದ ವಿಧಾನ (Procedure) ಕ್ಕನುಸಾರವಾಗಿಯೇ ನಡೆಯುತ್ತವೆ.

## ಪರಿಶಿಷ್ಟವು

## ( ಕ. ೮ ನೋಡಿ )

## ೧ ಮತ್ತು ೨ ನೇ ವರ್ಗದ ವಾರಸದಾರರು

### ವರ್ಗ ೧

ಮಗ, ಮಗಳು, ವಿಧವೆ, ತಾಯಿ, ಪೂರ್ವ ಮೃತ ಮಗನ ಮಗ, ಪೂರ್ವ ಮೃತ ಮಗನ ಮಗಳು, ಪೂರ್ವ ಮೃತ ಮಗಳ ಮಗ, ಪೂರ್ವ ಮೃತ ಮಗಳ ಮಗಳು, ಪೂರ್ವ ಮೃತ ಮಗನ ವಿಧವೆ, ಪೂರ್ವ ಮೃತ ಮಗನ ಪೂರ್ವ ಮೃತ ಮಗನ ಮಗ, ಪೂರ್ವ ಮೃತ ಮಗನ ಪೂರ್ವ ಮೃತ ಮಗನ ಮಗಳು, ಪೂರ್ವ ಮೃತ ಮಗನ ಪೂರ್ವ ಮೃತ ಮಗನ ವಿಧವೆ.

### ವರ್ಗ ೨

[೧] ತಂದೆ

[೨] (೧) ಮಗನ ಮಗಳಮಗ (೨) ಮಗನ ಮಗಳ ಮಗಳು

(೩) ಸೋದರ (೪) ಸೋದರಿ

[೩] (೧) ಮಗಳ ಮಗನ ಮಗ ( ) ಮಗಳ ಮಗನ ಮಗಳು
(೩) ಮಗಳ ಮಗಳ ಮಗ (೪) ಮಗಳ ಮಗಳ ಮಗಳು

[೪] (೧) ಸೋದರನ ಮಗ (೨) ಸೋದರಿಯ ಮಗ (೩) ಸೋದರನ ಮಗಳು (೪) ಸೋದರಿಯ ಮಗಳು

[೫] ತಂದೆಯ ತಂದೆ, ತಂದೆಯ ತಾಯಿ

[೬] ತಂದೆಯ ವಿಧವೆ, ಸೋದರನ ವಿಧವೆ

[೭] ತಂದೆಯ ಸೋದರ ತಂದೆಯ ಸೋದರಿ

[೮] ತಾಯಿಯ ತಂದೆ, ತಾಯಿಯ ತಾಯಿ

[೯] ತಾಯಿಯ ಸೋದರ ತಾಯಿಯ ಸೋದರಿ.

ವಿವರಣೆ – ಈ ಪರಿಶಿಷ್ಟದಲ್ಲಿ ಸೋದರ ಮತ್ತು ಸೋದರಿಯೆಂದರೆ ಭಿನ್ನ ಪಿತೃಕ ಸೋದರ ಅಥವಾ ಸೋದರಿಯೆಂದು ಅರ್ಥವಾಗುವದಿಲ್ಲ.

## ಟೀಕೆ

## ಉದ್ದೇಶ

ಈ ಕಲಮಿನ ವಾರಸದಾರರ ಪ್ರಾಶಸ್ತ್ಯಕ್ರಮವು ಪಿಂಡದಾನಾಧಿಕಾರ ಅಥವಾ ರಕ್ತಸಾಮೀಪ್ಯಗಳನ್ನಾಧರಿಸಿಲ್ಲವೆಂದು ಸ್ಪಷ್ಟವಿದೆ. ಇಲ್ಲಿನ ಪ್ರಾಶಸ್ತ್ಯಕ್ರಮಕ್ಕೆ ಪ್ರೇಮ ಅಕ್ಕರತೆಗಳೇ ತಳಹದಿಯಾಗಿರುವುದು ಕಂಡು ಬರುತ್ತದೆ. ಈ ದೃಷ್ಟಿಯಿಂದ ಪ್ರಾಶಸ್ತ್ಯ ಪಡೆಯಬೇಕಾದ ಅನೇಕ ಹೆಣ್ಣುವಳಿಗರನ್ನೂ ಗಂಡುವಳಿಗಳಿಗರೊಡನೆ ಒಂದೇ ಯಾದಿಯಲ್ಲಿ ಸೇರಿಸಿರುವುದು ೨ ನೆಯ ವರ್ಗದಲ್ಲಿ ಕಂಡು ಬರುತ್ತದೆ

ವಿವರಣೆ – ಈ ಕಲುವಿನ ಕೊನೆಯ ವಿವರಣೆಯಿಂದ ಸೋದರ ಅಥವಾ "ಸೋದರಿ" ಪದಗಳು ಭಿನ್ನ ಪಿತೃಕ ಸೋದರ ಅಥವಾ ಸೋದರಿಯರಿಗೆ ಅನ್ವಯಿಸಲಾರವೆಂದು ಶ್ರುತ ಪಡಿಸಲಾಗಿದೆ. ಕಾರಣ 'ಸೋದರ' ಅಥವಾ 'ಸೋದರಿ' ಈ ಕಲಮಿನನ್ವಯ ವಾರಸದಾರರೆನ್ನಿಸುವಾಗ, ಅಂಥ ವಾರಸದಾರರು ಭಿನ್ನ ಪಿತೃಕ ಸೋದರ ಸೋದರಿಯರೂ ಆಗಿರಬಹುದೆಂದು ಅರ್ಥ ಮಾಡಲಾಗದು.